ಪಾಪಂ ಹರತಿ ಯತ್ಪುಂಸಾಂ ಸ್ಮೃತಂ ಸಂಕಲ್ಪನಾಮಯಂ ।
ತತ್ಪುಂಡರೀಕನಯನಂ ವಿಷ್ಣೋರ್ದ್ರಕ್ಷ್ಯಾಮ್ಯಹಂ ಮುಖಂ ॥ ೪ ॥

ನಿರ್ಜಗ್ಮುಶ್ಚ ಯತೋ ವೇದಾ ವೇದಾಂಗಾನ್ಯಖಿಲಾನಿ ಚ ।
ದ್ರಕ್ಷ್ಯಾಮಿ ಯತ್ಪರಂ ಧಾಮ ದೇವಾನಾಂ ಭಗವನ್ಮುಖಂ ॥ ೫ ॥

ಯಜ್ಞೇಷು ಯಜ್ಞಪುರುಷಃ ಪುರುಷೈಃ ಪುರುಷೋತ್ತಮಃ ।
ಇಜ್ಯತೇ ಯೋಽಖಿಲಾಧಾರಸ್ತಂ ದ್ರಕ್ಷ್ಯಾಮಿ ಜಗತ್ಪತಿಂ ॥ ೬ ॥

ಇಷ್ಟ್ವಾ ಯಮಿಂದ್ರೋ ಯಜ್ಞಾನಾಂ ಶತೇನಾಮರರಾಜತಾಂ ।
ಅವಾಪ ತಮನಂತಾದಿಮಹಂ ದ್ರಕ್ಷ್ಯಾಮಿ ಕೇಶವಂ ॥ ೭ ॥

ನ ಬ್ರಹ್ಮಾ ನೇಂದ್ರರುದ್ರಾಶ್ವಿವಸ್ವಾದಿತ್ಯಮರುದ್ಗಣಾಃ ।
ಯಸ್ಯ ಸ್ವರೂಪಂ ಜಾನಂತಿ ಸ್ಪೃಶತ್ಯದ್ಯ ಸ ಮೋ ಹರಿಃ ॥ ೮ ॥

---

೪. ಯಾವುದನ್ನು ಮನಸ್ಸಿನಲ್ಲಿ ಕಲ್ಪನಾಮಾತ್ರದಿಂದ ಭಾವಿಸಿದರೂ ಮಾನವರ ಪಾಪರಾಶಿಯೆಲ್ಲವೂ ಅಪಹೃತವಾಗುವುದೋ ಆ ಕೃಷ್ಣನ ಕಮಲದಂತಹ ಕಣ್ಣುಳ್ಳ ಮುಖವನ್ನು ಇಂದು ನೋಡುವೆನು.

೫. ಯಾವುದರಿಂದ ವೇದಗಳೂ ಸಕಲ ವೇದಾಂಗಗಳೂ ಹೊರಹೊಮ್ಮಿರುವುವೋ, ಯಾವುದು ದೇವತೆಗಳಿಗೂ ಪರಮಧಾಮವೆನಿಸಿರುವುದೋ ಅಂತಹ ಆ ಭಗವಂತನ ಮುಖವನ್ನು ಈದಿನ ಕಾಣುವೆನು.

೬. ಯಾವನು ಸಕಲ ವಸ್ತುಗಳಿಗೂ ಆಧಾರಭೂತನೂ ಜಗದೀಶ್ವರನೂ ಆಗಿರುವನೋ ಯಾವಾತನನ್ನು ಯಜ್ಞಗಳಿಂದ ಆರಾಧಿಸುವರೋ ಆ ಪುರುಷಶ್ರೇಷ್ಠನಾದ ಯಜ್ಞಪುರುಷನನ್ನು ನೋಡುವೆನು.

೭. ಯಾವಾತನನ್ನು ನೂರು ಯಜ್ಞಗಳಿಂದು ಸಂತೋಷಪಡಿಸಿ ಇಂದ್ರನು ದೇವತೆಗಳಿಗೆ ರಾಜನೆನಿಸಿದನ್ನೋ ಆ ಆದ್ಯಂತಶೂನ್ಯನಾದ ಕೇಶವನನ್ನು ಕಾಣುವೆನು.

೮. ಯಾವಾತನ ಸ್ವರೂಪವನ್ನು ಬ್ರಹ್ಮನೂ, ಇಂದ್ರನೂ, ರುದ್ರನೂ ಅಶ್ವಿನೀದೇವತೆಗಳೂ, ವಸುರುದ್ರಾದಿತ್ಯರೂ ಅರಿಯಲಾರರೋ ಆ ಶ್ರೀಹರಿಯು ಇಂದು ನನ್ನನ್ನು ಸ್ಪರ್ಶಿಸುವನು.

ಸರ್ವಾತ್ಮಾ ಸರ್ವಗಃ ಸರ್ವಃ ಸರ್ವಭೂತೇಷು ಸಂಸ್ಥಿತಃ ।
ಯೋ ಭವತ್ಯವ್ಯಯೋ ವ್ಯಾಪೀ ಸ ವೀಕ್ಷ್ಯತೇ ಮಯಾದ್ಯ ಹ ॥ ೯ ॥

ಮತ್ಸ್ಯಕೂರ್ಮವರಾಹಾದ್ಯೈಃ ಸಿಂಹರೂಪಾದಿಭಿಃ ಸ್ಥಿತಂ ।
ಚಕಾರ ಯೋಗತೋ ಯೋಗಂ ಸ ಮಾಮಾಲಾಪಯಿಷ್ಯತಿ ॥ ೧೦ ॥

ಸಾಂಪ್ರತಂ ಚ ಜಗತ್ಸ್ವಾಮೀ ಕಾರ್ಯಜಾತೇ ವ್ರಜೇ ಸ್ಥಿತಿಂ ।
ಕರ್ತುಂ ಮನುಷ್ಯತಾಂ ಪ್ರಾಪ್ತಃ ಸ್ವೇಚ್ಛಾದೇಹಧೃಗವ್ಯಯಃ ॥ ೧೧ ॥

ಯೋಽನಂತಃ ಪೃಥಿವೀಂ ಧತ್ತೇ ಶಿಖರಸ್ಥಿತಿಸಂಸ್ಥಿತಾಂ ।
ಸೋಽವತೀರ್ಣೋ ಜಗತ್ಯರ್ಥೇ ಮಾಮಕ್ರೂರೇತಿ ವಕ್ಷ್ಯತಿ ॥ ೧೨ ॥

ಪಿತೃಬಂಧುಸುಹೃದ್ಭ್ರಾತೃಮಾತೃಬಂಧುಮಯೀಮಿಮಾಂ ।
ಯನ್ಮಾಯಾಂ ನಾಲಮುದ್ಧರ್ತುಂ ಜಗತ್ತಸ್ಮೈ ನಮೋ ನಮಃ ॥ ೧೩ ॥

---

೯. ಯಾವಾತನು, ಸರ್ವಸ್ವರೂಪನೂ, ಸರ್ವತ್ರ ಸಂಚರಿಸುವವನೂ ಸರ್ವಭೂತಗಳಲ್ಲಿಯೂ ನೆಲಸಿರುವವನೂ, ಸರ್ವವ್ಯಾಪಕನೂ ಆಗಿರುವನೋ ಆ ಅವ್ಯಯನಾದ ಪುರುಷನನ್ನು ಕಾಣುವೆನು.

೧೦. ಯಾವಾತನು ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ ಮೊದಲಾದ ಅವತಾರಗಳನ್ನು ಲೀಲಾಮಾತ್ರದಿಂದ ನಿರ್ವಹಿಸಿದನೋ ಆ ಸ್ವಾಮಿಯು ನನ್ನನ್ನು ಮಾತನಾಡಿಸುವನು.

೧೧. ಈಗಲೂ ಕೂಡ ಸ್ವೇಚ್ಛೆಯಿಂದ ನಾನಾ ರೂಪಗಳನ್ನು ಧರಿಸ ಬಲ್ಲ ಆ ಅವಿನಾಶಿಯಾದ ಜಗತ್ಪ್ರಭುವು ನಾನಾ ವಿಧವಾದ ಕಾರ್ಯಗಳನ್ನು ನಡೆಸಲು ಗೋಕುಲದಲ್ಲಿ ಮನುಷ್ಯನಂತೆ ಅವತರಿಸಿರುವನು.

೧೨. ಯಾವಾತನು ತನ್ನ ತಲೆಗಳಮೇಲೆ ಈ ಭೂಮಂಡಲವನ್ನು ಹೊತ್ತಿರುವನೋ ಆ ಅನಂತನು, ಜಗತ್ಕಲ್ಯಾಣಕ್ಕಾಗಿ ಅವತರಿಸಿ ಇಂದು ನನ್ನನ್ನು ಅಕ್ರೂರನೆಂದು ಕರೆಯುವನು.

೧೩. ಯಾವಾತನ ಮಾಯೆಯನ್ನು ತಂದೆ, ತಾಯಿ, ಅಣ್ಣ, ತಮ್ಮ, ಬಂಧು, ಸ್ನೇಹಿತ ಎಂದು ಮುಂತಾಗಿ ಭಾವಿಸಿ ಕೇಡನ್ನು ತಪ್ಪಿಸಿಕೊಳ್ಳಲಾರದೆ ಜಗತ್ತು ವಿವಶವಾಗಿದೆಯೋ ಆ ಪರಮಪುರುಷನಿಗೆ ನಮಸ್ಕಾರವು.

ತರಂತ್ಯವಿದ್ಯಾಂ ವಿತತಾಂ ಹೃದಿ ಯಸ್ಮಿನ್ನಿವೇಶಿತೇ ।
ಯೋಗಮಾಯಾಮಿಮಾಂ ಮರ್ತ್ಯಾಸ್ತಸ್ಮೈ ವಿದ್ಯಾತ್ಮನೇ ನಮಃ ॥ ೧೪ ॥

ಯಜ್ವಭಿರ್ಯಜ್ಞಪುರುಷೋ ವಾಸುದೇವಶ್ಚ ಶಾಶ್ವತೈಃ ।
ವೇದಾಂತವೇದಿಭಿರ್ವಿಷ್ಣುಃ ಪ್ರೋಚ್ಯತೇ ಯೋ ನತೋಽಸ್ಮಿ ತಂ ॥ ೧೫ ॥

ತಥಾ ಯತ್ರ ಜಗದ್ಧಾಮ್ನಿ ಧಾರ್ಯತೇ ಚ ಪ್ರತಿಷ್ಠಿತಂ ।
ಸದಸತ್ತ್ವಂ ಸ ಸತ್ತ್ವೇನ ಮಯ್ಯಸೌ ಯಾತು ಸೌಮ್ಯತಾಂ ॥ ೧೬ ॥

ಸ್ಮೃತೇ ಸಕಲಕಲ್ಯಾಣಭಾಜನಂ ಯತ್ರ ಜಾಯತೇ ।
ಪುರುಷಪ್ರವರಂ ನಿತ್ಯಂ ವ್ರಜಾಮಿ ಶರಣಂ ಹರಿಂ ॥ ೧೭ ॥

---

೧೪. ಯಾವಾತನು ಹೃದಯದಲ್ಲಿ ನೆಲೆಸಲು ಮನುಜರು ಹೀಗೆ ಎಲ್ಲೆಲ್ಲೂ ಹರಡಿದ ಅವಿದ್ಯಾ ಯೋಗಮಾಯಾ ಎಂಬ ಹೆಸರನ್ನು ಪಡೆದ ಮಾಯೆಯನ್ನು ಬಿಟ್ಟು, ಶುದ್ಧಜ್ಞಾನವನ್ನು ಪಡೆಯುವರೋ ಆ ಜ್ಞಾನಸ್ವರೂಪನಿಗೆ ನಮಸ್ಕಾರವು.

೧೫. ಯಾವಾತನನ್ನು ಯಾಗಮಾಡುವವರು ಯಜ್ಞಪುರುಷನೆಂದೂ ಶಾಶ್ವತರು ವಾಸುದೇವನೆಂದೂ, ವೇದಾಂತವನ್ನು ಬಲ್ಲವರು ವಿಷ್ಣುವೆಂದೂ ಕರೆಯುವರೋ ಆತನಿಗೆ ನಮಸ್ಕಾರಮಾಡುವೆನು.

೧೬. ಈ ಜಗತ್ತು ಯಾವಾತನಲ್ಲಿ ನೆಲಸಿದೆಯೋ ಮತ್ತು ಯಾರಿಂದಲೇ ನಿಂತಿದೆಯೋ, ಯಾವಾತನು ಸದಸದ್ರೂಪನೂ ಆಗಿರುವನೋ ಆ ಪರಮಧಾಮಸ್ವರೂಪನಾದ ಸತ್ತ್ವಮೂರ್ತಿಯು ನನಲ್ಲಿ ಸೌಮ್ಯತೆಯನ್ನು ತೋರ್ಪಡಿಸಲಿ.

೧೭. ಯಾವಾತನನ್ನು ಸ್ಮರಿಸಿದ ಮಾತ್ರದಿಂದಲೇ ಸಕಲಮಂಗಲಗಳೂ (ಸ್ಮರಿಸಿದವರಿಗೆ) ಉಂಟಾಗುವುವೋ, ಅಂತಹ ಪುರುಷಶ್ರೇಷ್ಠನಾದ ಶ್ರೀಹರಿಯನ್ನು ಮರೆಹೋಗುವೆನು.

॥ ವ್ಯಾಸ ಉವಾಚ

ಇತ್ಥಂ ಸ ಚಿಂತಯನ್ವಿಷ್ಣುಂ ಭಕ್ತಿನಮ್ರಾತ್ಮಮಾನಸಃ ।
ಅಕ್ರೂರೋ ಗೋಕುಲಂ ಪ್ರಾಪ್ತಃ ಕಿಂಚಿತ್ಸೂರ್ಯೇ ವಿರಾಜತಿ ॥ ೧೮ ॥

ಸ ದದರ್ಶ ತದಾ ತತ್ರ ಕೃಷ್ಣಮಾದೋಹನೇ ಗವಾಂ ।
ವತ್ಸಮಧ್ಯಗತಂ ಫುಲ್ಲನೀಲೋತ್ಪಲದಲಚ್ಛವಿಂ ॥ ೧೯ ॥

ಪ್ರಫುಲ್ಲಪದ್ಮಪತ್ರಾಕ್ಷಂ ಶ್ರೀವತ್ಸಾಂಕಿತವಕ್ಷಸಂ ।
ಪ್ರಲಂಬಬಾಹುಮಾಯಾಮತುಂಗೋರಸ್ಥಲಮುನ್ನಸಂ ॥ ೨೦ ॥

ಸವಿಲಾಸಸ್ಮಿತಾಧಾರಂ ಬಿಭ್ರಾಣಂ ಮುಖಪಂಕಜಂ ।
ತುಂಗರಕ್ತನಖಂ ಪದ್ಭ್ಯಾಂ ಧರಣ್ಯಾಂ ಸುಪ್ರತಿಷ್ಠಿತಂ ॥ ೨೧ ॥

---

೧೮. ವ್ಯಾಸನು ಹೇಳಿದನು—ಈರೀತಿಯಾಗಿ ಆ ಅಕ್ರೂರನು ಭಕ್ತಿಯಿಂದ ತುಂಬಿರುವ ಹೃದಯವುಳ್ಳವನಾಗಿ ಆ ಶ್ರೀಕೃಷ್ಣನನ್ನೇ ನೆನೆಯುತ್ತಾ ಸೂರ್ಯನು ಇರುವಾಗಲೇ (ಮುಳುಗುವ ಮೊದಲೇ) ಗೋಕುಲವನ್ನು ಸೇರಿದನು.

೧೯. ಆಗ ಅವನು ಕರುಗಳ ನಡುವೆ ನಿಂತು ಹಸುಗಳನ್ನು ಕರೆಯುತ್ತಿರುವ, ಅರಳಿದ ಕನ್ನೈದಿಲೆಯಂತೆ ಶ್ಯಾಮಲವಾದ ಕಾಂತಿಯುಳ್ಳ ಶ್ರೀಹರಿಯನ್ನು ಕಂಡನು.

೨೦. ಆ ಕೃಷ್ಣನ ಕಣ್ಣುಗಳು ಅರಳಿದ ತಾವರೆಯನ್ನು ಹೋಲುತ್ತಿದ್ದವು. ಎದೆಯಮೇಲೆ ಶ್ರೀವತ್ಸವೆಂಬ ಮಚ್ಚೆಯು ಶೋಭಿಸುತ್ತಿತ್ತು. ಅವನ ತೋಳುಗಳು ಉದ್ದವಾಗಿದ್ದುವು. ಎದೆಯು ವಿಶಾಲವಾಗಿಯೂ, ಉಬ್ಬಾಗಿಯೂ ಇದ್ದಿತು, ಮೂಗು ಎತ್ತರವಾಗಿದ್ದಿತು

೨೧. ಆತನ ಮುಖಾರವಿಂದವು ಸರ್ವದಾ (ಮಂದಹಾಸವನ್ನು) ತಿಳಿನಗೆಯನ್ನು ಬೀರುತ್ತಿತ್ತು. ಉಗುರುಗಳು ಕೆಂಪಾಗಿಯೂ, ಉಬ್ಬಿಕೊಂಡೂ ಇದ್ದವು- ಅವನು ಎರಡು ಕಾಲುಗಳೂರಿ ನೆಲದಮೇಲೆ ನಿಂತಿದ್ದನು.

ಬಿಭ್ರಾಣಂ ವಾಸಸೀ ಪೀತೇ ವನ್ಯಪುಷ್ಪವಿಭೂಷಿತಂ ।
ಸಾಂದ್ರನೀಲಲತಾಹಸ್ತಂ ಸಿತಾಂಭೋಜಾವತಂಸಕಂ ॥ ೨೨ ॥

ಹಂಸೇಂದುಕುಂದಧವಲಂ ನೀಲಾಂಬರಧರಂ ದ್ವಿಜಾಃ ।
ತಸ್ಯಾನು ಬಲಭದ್ರಂ ಚ ದದರ್ಶ ಯದುನಂದನಂ ॥ ೨೩ ॥

ಪ್ರಾಂಶುಮುತ್ತುಂಗಬಾಹುಂ ಚ ವಿಕಾಶಿಮುಖಪಂಕಜಂ ।
ಮೇಘಮಾಲಾಪರಿವೃತಂ ಕೈಲಾಸಾದ್ರಿಮಿವಾಪರಂ ॥ ೨೪ ॥

ತೌ ದೃಷ್ಟ್ವಾ ವಿಕಸದ್ವಕ್ತ್ರಸರೋಜಃ ಸ ಮಹಾಮತಿಃ ।
ಪುಲಕಾಂಚಿತಸರ್ವಾಂಗಸ್ತದಾಕ್ರೂರೋಽಭವದ್ದ್ವಿಜಾಃ ॥ ೨೫ ॥

ಯ ಏತತ್ಪರಮಂ ಧಾಮ ಏತತ್ತತ್ಪರಮಂ ಪದಂ ।
ಅಭವದ್ವಾಸುದೇವೋಽಸೌ ದ್ವಿಧಾ ಯೋಽಯಂ ವ್ಯವಸ್ಥಿತಃ ॥ ೨೬ ॥

---

೨೨. ಅಲ್ಲದೆ ಆತನು ಪೀತಾಂಬರಗಳನ್ನುಟ್ಟಿದ್ದನು. ಕಾಡಿನ ಹೂಗಳಿಂದ ಸಿಂಗರಿಸಿಕೊಂಡಿದ್ದನು ಮತ್ತು ಬಿಳಿದಾವರೆಯೊಂದನ್ನು ಅವತಂಸವಾಗಿ ಧರಿಸಿದ್ದನು.

೨೩. ಎಲೈ ಬ್ರಾಹ್ಮಣೋತ್ತಮರೇ, ಆತನ ಸಮೀಪದಲ್ಲಿ ಬಿಳುಪಿನ ಕಾಂತಿಯಿಂದ ಹಂಸಗಳನ್ನೂ, ಚಂದ್ರನನ್ನೂ, ಮೊಲ್ಲೆಹೂಗಳನ್ನೂ ಹೋಲುತ್ತಿದ್ದ, ನೀಲವಾದ ವಸ್ತ್ರವನ್ನುಟ್ಟಿದ್ದ ಬಲಭದ್ರನನ್ನೂ ಆ ಅಕ್ರೂರನು ಕಂಡನು.

೨೪. ಆ ಬಲರಾಮನು ಎತ್ತರವಾಗಿದ್ದನು, ಅವನ ಬಾಹುಗಳು ಪುಷ್ಟವಾಗಿಯೂ, ನೀಳವಾಗಿಯೂ ಇದ್ದುವು. ಆತನ ಮುಖವು ಅರಳಿದ ತಾವರೆಯನ್ನು ಹೋಲುತ್ತಿತ್ತು. ಆತನನ್ನು ಕಂಡರೆ, ಮೇಘಮಾಲೆಯಿಂದ ಪರಿವೃತವಾದ ಹಿಮಗಿರಿಯನ್ನು ಕಂಡಂತಾಗುತ್ತಿತ್ತು.

೨೫. ಎಲೈ ದ್ವಿಜರೇ, ಅವರಿಬ್ಬರನ್ನೂ ನೋಡುತ್ತಲೇ ಆ ಅಕ್ರೂರನ ಮುಖವೂ ಕಂಗಳೂ ಸಂತೋಷದಿಂದ ಅರಳಿದುವು. ಮೈಯೆಲ್ಲವೂ ರೋಮಾಂಚಿತವಾಯಿತು, ಆ ಸಮಯದಲ್ಲಿ

೨೬. ಯಾವುದು ಪರಂಜ್ಯೋತಿಯೆಂದೂ, ಪರಮಪದವೆಂದೂ ಕೀರ್ತಿಸಲ್ಪಡುವುದೋ ಆ ಪರಬ್ರಹ್ಮವಸ್ತುವೇ ಬಲರಾಮ ಶ್ರೀಕೃಷ್ಣರೆಂಬ ಹೆಸರಿನ ವಸುದೇವನಸೂನುಗಳೆಂಬುದಾಗಿ ಭಾವಿಸುವೆನು.

ಸಾಫಲ್ಯಮಕ್ಷ್ಣೋರ್ಯುಗಪನ್ಮಮಾಸ್ತು
ದೃಷ್ಟೇ ಜಗದ್ಧಾತರಿ ಹಾಸಮುಚ್ಚೈಃ ।
ಅಪ್ಯಂಗಮೇತದ್ಭಗವತ್ಪ್ರಸಾದಾ-
ದ್ದತ್ತಾಂಗಸಂಗೇ ಫಲವತ್ಕೃತಂ ಸ್ಯಾತ್ ॥ ೨೭ ॥

ಅದ್ಯೈವ ಸ್ಪೃಷ್ಟ್ವಾ ಮಮ ಹಸ್ತಪದ್ಮಂ
ಕರಿಷ್ಯತಿ ಶ್ರೀಮದನಂತಮೂರ್ತಿಃ ।
ಯಸ್ಯಾಂಗುಲಿಸ್ಪರ್ಶಹತಾಖಿಲಾಘ್ಯೈ-
ರವಾಪ್ಯತೇ ಸಿದ್ಧಿರನುತ್ತಮಾ ನರೈಃ ॥ ೨೮ ॥

ತಥಾಶ್ವಿರುದ್ರೇಂದ್ರವಸುಪ್ರಣೇತಾ
ದೇವಾಃ ಪ್ರಯಚ್ಛಂತಿ ವರಂ ಪ್ರಹೃಷ್ಟಾಃ ।
ಚಕ್ರಂ ಘ್ನತಾ ದೈತ್ಯಪತೇರ್ಹೃತಾನಿ
ಗೃತ್ಯಾಂಗನಾನಾಂ ನಯನಾಂತರಾಣಿ ॥ ೨೯ ॥

---

೨೭. ಆ ಜಗತ್ಕಾರಣನಾದ ಪರಮಪುರುಷನನ್ನು ಕಾಣುವ ನನ್ನೀ ಕಣ್ಣುಗಳು ಏಕಕಾಲದಲ್ಲಿ ಸಫಲವಾದುವು. ಅದರಂತಯೇ ನನ್ನ ಈ ಶರೀರವು ಸಹ ಆ ಪರಮಾತ್ಮನ ಅಂಗಸ್ಪರ್ಶದಿಂದ ಸಫಲವಾಗುವುದೇ ?

೨೮. ಯಾವಾತನ ಅಂಗುಲೀಸ್ಪರ್ಶಮಾತ್ರದಿಂದಲೇ ಮಾನವರು ತಮ್ಮ ಪಾಪಗಳೆಲ್ಲವುಗಳಿಂದಲೂ ಬಿಡಲ್ಪಟ್ಟು ಪರಮೋತ್ತಮವಾದ ಸಿದ್ಧಿಯನ್ನು ಪಡೆಯುವರೋ ಆ ನಾಶರಹಿತನು ನನ್ನನ್ನು ಕೈತುಂಬ ಸವರಿ ಮಂಗಲಮಯ ನನ್ನಾಗಿ ಮಾಡುವನು.

೨೯. ಆತನ ಕರಸ್ಪರ್ಶವನ್ನು ಯಾವಾತನು ಹೊಂದುವನೋ ಆತನಿಗೆ ಅಶ್ವಿನೀದೇವತೆಗಳೂ, ರುದ್ರನೂ, ಇಂದ್ರನೂ, ವಸುಗಳೂ, ಇತರದೇವತೆಗಳೂ ಸಂತೋಷದಿಂದ ವರಗಳನ್ನು ಕೊಡುವರು.

ಯತ್ರಾಂಬು ವಿನ್ಯಸ್ಯ ಬಲಿರ್ಮನೋಜ್ಞಾ-
ಮವಾಪ ಭೋಗಾನ್ವಸುಧಾತಲಸ್ಥಃ ।
ತಥಾಮರೇಶಸ್ತ್ರಿದಶಾಧಿಪತ್ಯಂ
ಮನ್ವಂತರಂ ಪೂರ್ಣಮವಾಪ ಶಕ್ರಃ ॥ ೩೦ ॥

ಅಥೇಶ ಮಾಂ ಕಂಸಪರಿಗ್ರಹೇಣ
ದೋಷಾಸ್ಪದೀಭೂತಮದೋಷಯುಕ್ತಂ ।
ಕರ್ತಾ ನ ಮಾನೋಪಹಿತಂ ಧಿಗಸ್ತು
ಯಸ್ಮಾನ್ಮನಃ ಸಾಧುಬಹಿಷ್ಕೃತೋ ಯಃ ॥ ೩೧ ॥

ಜ್ಞಾನಾತ್ಮಕಸ್ಯಾಖಿಲಸತ್ತ್ವರಾಶೇ-
ರ್ವ್ಯಾವೃತ್ತದೋಷಸ್ಯ ಸದಾಸ್ಫುಟಸ್ಯ ।
ಕಿಂ ವಾ ಜಗತ್ಯತ್ರ ಸಮಸ್ತಪುಂಸಾ-
ಮಜ್ಞಾತಮಸ್ಯಾಸ್ತಿ ಹೃದಿ ಸ್ಥಿತಸ್ಯ ॥ ೩೨ ॥

---

೩೦–೩೧. ಯಾವಾತನು ದೈತ್ಯವೀರರ ಮೇಲೆ ಚಕ್ರವನ್ನು ಪ್ರಯೋಗಿಸುವಾಗಲೇ, ದೈತ್ಯಾಂಗನೆಯರು (ತಮ್ಮ) ಪ್ರಿಯರ ಕಡೆಯಿಂದ (ತಮ್ಮ) ನಯನಗಳನ್ನು ತಿರುಗಿಸಿ ಆತನಲ್ಲಿಯೇ ಕೇಂದ್ರೀಕರಿಸಿದರೋ ಮತ್ತು ಯಾವಾತನ ಕೈಗೆ ದಾನಜಲವನ್ನು ಬಿಟ್ಟು ಬಲಿಚಕ್ರವರ್ತಿಯು, ರಸಾತಲದಲ್ಲಿಯೇ ಸಕಲ ಭೋಗಗಳನ್ನೂ ಅನುಭವಿಸುತ್ತಿರುವನೋ ಮತ್ತು ಯಾವನ ಅನುಗ್ರಹದಿಂದ ಒಂದು ಮನ್ವಂತರಕಾಲ ಪೂರ್ತಿಯಾಗಿ ಇಂದ್ರನು ದೇವತೆಗಳಿಗೆ ಅರಸನಾಗಿರುವನೋ, ಆ ಈಶ್ವರನು, ಕಂಸನಬಳಿಯಲ್ಲಿರುವುದರಿಂದ ದೋಷಭಾಗಿಯಾಗಿರುವ ನನ್ನನ್ನು ದೋಷರಹಿತನನ್ನಾಗಿ ಮಾಡುವನು. ಯಾವನ ಮನಸ್ಸು ಇಲ್ಲದ ಅಭಿಮಾನಗಳಿಗೆ ಸಿಲುಕಿ ಆ ಪರಮಪುರುಷನಿಂದ ದೂರವಾಗಿರುವುದೋ ಅಂತಹ ಸಾಧುಜನಬಹಿಷ್ಕೃತನಾದ ಪುರುಷನಿಗೆ ಧಿಕ್ಕಾರವಿರಲಿ.

೩೨. ಜ್ಞಾನಸ್ವರೂಪನೂ, ಸತ್ತ್ವಗುಣಕ್ಕೆ ನೆಲೆಯೂ (ಆಶ್ರಯನೂ) ದೋಷರಹಿತನೂ, ಯಾರಿಗೂ ಗೋಚರನಾಗದವನೂ ಮತ್ತು ಸಕಲ ಪುರುಷರ ಹೃದಯಗಳಲ್ಲಿಯೂ ನೆಲಸಿರುವವನೂ ಆದ ಆ ಪ್ರಭುವಿಗೆ ಈ ಜಗತ್ತಿನಲ್ಲಿ ತಿಳಿಯದಂತಹುದು ಯಾವುದು ತಾನೇ ಇರುವುದು?

ತಸ್ಮಾದಹಂ ಭಕ್ತಿವಿನಮ್ರಗಾತ್ರೋ
ವ್ರಜಾಮಿ ವಿಶ್ವೇಶ್ವರಮೀಶ್ವರಾಣಾಂ ।
ಅಂಶಾವತಾರಂ ಪುರುಷೋತ್ತಮಸ್ಯ
ಅನಾದಿಮಧ್ಯಾಂತಮಜಸ್ಯ ವಿಷ್ಣೋಃ ॥ ೩೩ ॥

ಇತಿ ಶ್ರೀಮಹಾಪುರಾಣೇ ಆದಿಬ್ರಾಹ್ಮೇ ಕೃಷ್ಣಕ್ರೀಡಾಯಾಮಕ್ರೂರಾ-
ಗಮನವರ್ಣನಂ ನಾಮೈಕನವತ್ಯಧಿಕಶತತಮೋಽಧ್ಯಾಯಃ

---

೩೩. ಆದುದರಿಂದ ನಾನು ಭಕ್ತಿಯಿಂದ (ವಿನಮ್ರವಾದ ಶರೀರವುಳ್ಳವನಾಗಿ) ಶರೀರವನ್ನು ನಮ್ರವನ್ನಾಗಿ ಮಾಡಿಕೊಂಡು ಆದಿ, ಮಧ್ಯ, ಅಂತಗಳೊಂದೂ ಇಲ್ಲದ ಆ ಪುರುಷೋತ್ತಮನಾದ ವಿಷ್ಣುವಿನ ಅಂಶಾವತಾರನಾದ ಜಗತ್ಪ್ರಭುವಿನ ಬಳಿಗೆ ಹೋಗುವೆನು ಎಂದು ಆ ಅಕ್ರೂರನು ಮನಸ್ಸಿನಲ್ಲಿ ಭಾವಿಸುತ್ತಿದ್ದನು.

ಇಲ್ಲಿಗೆ ಶ್ರೀಬ್ರಹ್ಮಪುರಾಣದಲ್ಲಿ ಅಕ್ರೂರನು ಶ್ರೀಬಲರಾಮ ಕೃಷ್ಣರನ್ನು ಸ್ತೋತ್ರ ಮಾಡಿದನೆಂಬ ನೂರತೊಂಭತ್ತೊಂದನೆಯ ಅಧ್ಯಾಯವು ಮುಗಿದುದು.



ಶ್ರೀಃ

ಓಂ ತತ್ಸದ್ಬ್ರಹ್ಮಣೇನಮಃ

# ಅಥ ಮಹಾಪುರಾಣೇ ಬ್ರಾಹ್ಮೇ

## ದ್ವಿನವತ್ಯಧಿಕಶತತಮೋಽಧ್ಯಾಯಃ

॥ ವ್ಯಾಸ ಉವಾಚ ॥

**ಚಿಂತಯನ್ನಿತಿ ಗೋವಿಂದಮುಪಗಮ್ಯ ಸ ಯಾದವಃ ।**
**ಅಕ್ರೂರೋಽಸ್ಮೀತಿ ಚರಣೌ ನನಾಮ ಶಿರಸಾ ಹರೇಃ ॥ ೧ ॥**

**ಸೋಽಪ್ಯೇನಂ ಧ್ವಜವಜ್ರಾಬ್ಜಕೃತಚಿಹ್ನೇನ ಪಾಣಿನಾ ।**
**ಸಂಸ್ಪೃಶ್ಯಾಕೃಷ್ಯ ಚ ಪ್ರೀತ್ಯಾ ಸುಗಾಢಂ ಪರಿಷಸ್ವಜೇ ॥ ೨ ॥**

**ಕೃತಸಂವದನೌ ತೇನ ಯಥಾವದ್ಬಲಕೇಶವೌ ।**
**ತತಃ ಪ್ರವಿಷ್ಟೌ ಸಹಸಾ ತಮಾದಾಯಾತ್ಮಮಂದಿರಂ ॥ ೩ ॥**

---

### ನೂರತೊಂಭತ್ತೆರಡನೆಯ ಅಧ್ಯಾಯವು

೧. ವ್ಯಾಸನು ಹೇಳತೊಡಗಿದನು—ಈರೀತಿಯಾಗಿ ಮನಸ್ಸಿನಲ್ಲಿ ಭಾವಿಸುತ್ತಾ ಆ ಅಕ್ರೂರನೆಂಬ ಯಾದವನು ಆ ಶ್ರೀಕೃಷ್ಣನ ಬಳಿಗೆ ಬಂದು, ಇದೋ ಅಕ್ರೂರನಾದ ನಾನು ಬಂದಿರುವೆನು ಎನ್ನುತ್ತಾ ತಲೆಮುಟ್ಟಿ ಕಾಲಿಗೆ ನಮಸ್ಕರಿಸಿದನು.

೨. ಆಗ ಆ ಕೃಷ್ಣನೂ ಕೂಡ ಪ್ರೀತಿಯಿಂದ ಆತನನ್ನು ತನ್ನ ಧ್ವಜ, ವಜ್ರ, ಕಮಲ ಮೊದಲಾದ ಶುಭಲಕ್ಷಣಗಳುಳ್ಳ ಕರದಿಂದ ತಡವಿ ಮೇಲಕ್ಕೆ ಸೆಳೆದುಕೊಂಡು ಗಾಢಾಲಿಂಗನಮಾಡಿದನು.

೩. ಹೀಗೆ ಬಲರಾಮನೂ, ಕೃಷ್ಣನೂ ಆತನಿಗೆ ಪ್ರತಿವಂದನವನ್ನು ಮಾಡಿ ಆತನನ್ನು ಕರೆದುಕೊಂಡು ಬೇಗನೆ ತಮ್ಮ ಮನೆಗೆ ಪ್ರವೇಶಿಸಿದರು.

ಸಹ ತಾಭ್ಯಾಂ ತದಾಕ್ರೂರಃ ಕೃತಸಂವಂದನಾದಿಕಃ ।
ಭುಕ್ತಭೋಜ್ಯೋ ಯಥಾನ್ಯಾಯಮಾಚಚಕ್ಷೇ ತತಸ್ತಯೋಃ ॥ ೪ ॥

ಯಥಾನಿರ್ಭರ್ತ್ಸಿತಸ್ತೇನ ಕಂಸೇನಾನಕದುಂದುಭಿಃ ।
ಯಥಾ ಚ ದೇವಕೀ ದೇವೀ ದಾನವೇನ ದುರಾತ್ಮನಾ ॥ ೫ ॥

ಉಗ್ರಸೇನೇ ಯಥಾ ಕಂಸಃ ಸ ದುರಾತ್ಮಾ ಚ ವರ್ತತೇ ।
ಯಂ ಚೈವಾರ್ಥಂ ಸಮುದ್ದಿಶ್ಯ ಕಂಸೇನ ಸ ವಿಸರ್ಜಿತಃ ॥ ೬ ॥

ತತ್ಸರ್ವಂ ವಿಸ್ತರಾಚ್ಛ್ರುತ್ವಾ ಭಗವಾನ್ಕೇಶಿಸೂದನಃ ।
ಉವಾಚಾಖಿಲಮೇತತ್ತು ಜ್ಞಾತಂ ದಾನಪತೇ ಮಯಾ ॥ ೭ ॥

ಕರಿಷ್ಯೇ ಚ ಮಹಾಭಾಗ ಯದತ್ರೌಪಾಯಿಕಂ ಮತಂ ।
ವಿಚಿಂತ್ಯಂ ನಾನ್ಯಥೈತತ್ತೇ ವಿದ್ಧಿ ಕಂಸಂ ಹತಂ ಮಯಾ ॥ ೮ ॥

---

೪. ಆಗ ಅವರಿಂದ ಸತ್ಕೃತನಾದ ಆ ಅಕ್ರೂರನು ಊಟವಾದಮೇಲೆ ಅವರಿಬ್ಬರಿಗೂ, ನ್ಯಾಯಮಾರ್ಗವನ್ನತಿಕ್ರಮಿಸದೆ, ಈರೀತಿ ಹೇಳತೊಡಗಿದನು.

೫-೬. ಆ ದುಷ್ಟನಾದ ಕಂಸನು (ನಿನ್ನ ತಂದೆಯಾದ) ವಸುದೇವನನ್ನೂ (ತಾಯಿಯಾದ) ದೇವಕಿಯನ್ನೂ ಬಹುವಾಗಿ ನಿಂದಿಸಿದನು. ಅಲ್ಲದೆ ತನ್ನ ತಂದೆಯಾದ ಉಗ್ರಸೇನನ ವಿಷಯದಲ್ಲಿ ಬಹು ತುಚ್ಛವಾಗಿ ವರ್ತಿಸುತ್ತಿರುವನು ಮತ್ತೂ ನಿಮ್ಮಿಬ್ಬರನ್ನು ಕರೆಸುತ್ತಿರುವುದೂ ನಿಮ್ಮನ್ನು ನಾಶಮಾಡಬೇಕೆಂಬ ಉದ್ದೇಶದಿಂದಲೇ.

೭. ಹೀಗೆ ಅಕ್ರೂರನು ವಿಸ್ತಾರವಾಗಿ ವಿಸ್ತರಿಸಿ ಹೇಳಿದ ವೃತ್ತಾಂತವೆಲ್ಲವನ್ನೂ ಕೇಳಿ ಆ ಕೇಶಿಸಂಹಾರಿಯು ಅಕ್ರೂರನನ್ನು ಕುರಿತು ಎಲೈ ದಾನಶೀಲನೇ, ಇದೆಲ್ಲವನ್ನೂ ನಾನು ತಿಳಿದೇ ಇರುವೆನು.

೮. ಎಲೈ ಭಾಗ್ಯಶಾಲಿಯೇ, ಈ ವಿಷಯದಲ್ಲಿ ಯಾವುದು ಯುಕ್ತವಾದುದೋ ಅದನ್ನೇ ಮಾಡುವೆನು. ಇನ್ನೇನೂ ಯೋಚನೆಮಾಡಬೇಡ. ಆ ಕಂಸನು ನನ್ನಿಂದ ಹತನಾದನೆಂದೇ ತಿಳಿ.

**ಅಹಂ ರಾಮಶ್ಚ ಮಥುರಾಂ ಶ್ವೋ ಯಾಸ್ಯಾವಃ ಸಮಂ ತ್ವಯಾ ।**
**ಗೋಪವೃದ್ಧಾಶ್ಚ ಯಾಸ್ಯಂತಿ ಆದಾಯೋಪಾಯನಂ ಬಹು ॥ ೯ ॥**

**ನಿಶೇಯಂ ನೀಯತಾಂ ವೀರ ನ ಚಿಂತಾಂ ಕರ್ತುಮರ್ಹಸಿ ।**
**ತ್ರಿರಾತ್ರಾಭ್ಯಂತರೇ ಕಂಸಂ ಹನಿಷ್ಯಾಮಿ ಸಹಾನುಗಂ ॥ ೧೦ ॥**

**॥ ವ್ಯಾಸ ಉವಾಚ ॥**

**ಸಮಾದಿಶ್ಯ ತತೋ ಗೋಪಾನಕ್ರೂರೋऽಪಿ ಸಕೇಶವಃ ।**
**ಸುಷ್ವಾಪ ಬಲಭದ್ರಶ್ಚ ನಂದಗೋಪಗೃಹೇ ಗತಃ ॥ ೧೧ ॥**

**ತತಃ ಪ್ರಭಾತೇ ವಿಮಲೇ ರಾಮಕೃಷ್ಣೌ ಮಹಾಬಲೌ ।**
**ಅಕ್ರೂರೇಣ ಸಮಂ ಗಂತುಮುದ್ಯತೌ ಮಥುರಾಂ ಪುರೀಂ ॥ ೧೨ ॥**

**ದೃಷ್ಟ್ವಾ ಗೋಪೀಜನಃ ಸಾಸ್ರಃ ಶ್ಲಥದ್ವಲಯಬಾಹುಕಃ ।**
**ನಿಶ್ವಸಂಶ್ಚಾತಿದುಃಖಾರ್ತಃ ಪ್ರಾಹ ಚೇದಂ ಪರಸ್ಪರಂ ॥ ೧೩ ॥**

---

೯. ನಾಳೆಯದಿವಸ ನಾನೂ ಬಲರಾಮನೂ ನಿನ್ನೊಡನೆ ಮಥುರೆಗೆ ಹೊರಡುವೆವು. ನಮ್ಮ ಜೊತೆಗೆ, ವೃದ್ಧಗೋಪಾಲಕರೂ ಸಹ ಕಪ್ಪಕಾಣಿಕೆಗಳನ್ನು ತೆಗೆದುಕೊಂಡು ಅಲ್ಲಿಗೆ ಬರುವರು.

೧೦. ಎಲೈ ವೀರನೇ, ಈ ರಾತ್ರಿಯನ್ನು ಸುಖವಾಗಿ ಕಳೆ, ಮತ್ತೇನೂ ಯೋಚನೆಮಾಡಬೇಡ. ಆ ಕಂಸನನ್ನು ಅವನ ಅನುಯಾಯಿಗಳೊಡನೆ ಇನ್ನು ಮೂರು ರಾತ್ರೆಗಳೊಳಗಾಗಿ ಕೊಂದು ಹಾಕುವೆನು ಎಂದು ನುಡಿದನು.

೧೧. ಅನಂತರ ಅಕ್ರೂರನು ಗೋಪಾಲಕರಿಗೆಲ್ಲಾ ನಾಳೆ ಬೆಳಗ್ಗೆ ಪ್ರಯಾಣವೆಂದು ತಿಳಿಸಿ ರಾಮಕೃಷ್ಣರೊಡನೆ ನಂದಗೋಪನ ಮನೆಯಲ್ಲಿ ಮಲಗಿಕೊಂಡನು.

೧೨. ಮಾರನೆಯ ದಿನ ಬೆಳಗ್ಗೆ ಮಹಾಬಲಶಾಲಿಗಳಾದ ಆ ಬಲರಾಮ ಕೃಷ್ಣರಿಬ್ಬರೂ ಅಕ್ರೂರನೊಡನೆ ಮಥುರಾನಗರಕ್ಕೆ ಹೊರಡಲನುವಾದರು.

೧೩. ಅದನ್ನು ಕಾಣುತ್ತಲೇ ಗೋಪಿಯರಿಗೆಲ್ಲಾ ದುಃಖವುಕ್ಕೇರಿತು. ಕಣ್ಣುಗಳಲ್ಲಿ ನೀರು ತುಂಬಿತು. ಕೈಗಳಲ್ಲಿದ್ದ ಬಳೆಗಳು ಸಡಿಲವಾಗಿ ಜಾರಿ ಬಿದ್ದುಹೋದುವು. ಅವರ ಮುಖದಿಂದ ನಿಟ್ಟುಸಿರು ಹೊರಡುತ್ತಿತ್ತು. ಆಗ ಅವರು ತಮ್ಮತಮ್ಮಲ್ಲೇ ಈರೀತಿ ಮಾತನಾಡಿಕೊಳ್ಳತೊಡಗಿದರು.

ಮಥುರಾಂ ಪ್ರಾಪ್ಯ ಗೋವಿಂದಃ ಕಥಂ ಗೋಕುಲಮೇಷ್ಯತಿ ।
ನಾಗರಸ್ತ್ರೀಕಲಾಲಾಪಮಧು ಶ್ರೋತ್ರೇಣ ಪಾಸ್ಯತಿ ॥ ೧೪ ॥

ವಿಲಾಸಿವಾಕ್ಯಜಾತೇಷು ನಾಗರೀಣಾಂ ಕೃತಾಸ್ಪದಂ ।
ಚಿತ್ತಮಸ್ಯ ಕಥಂ ಗ್ರಾಮ್ಯಗೋಪಗೋಪೀಷು ಯಾಸ್ಯತಿ ॥ ೧೫ ॥

ಸಾರಂ ಸಮಸ್ತಗೋಷ್ಠಸ್ಯ ವಿಧಿನಾ ಹರತಾ ಹರಿಂ ।
ಪ್ರಹೃತಂ ಗೋಯೋಷಿತ್ಸು ನಿರ್ಘೃಣೇನ ದುರಾತ್ಮನಾ ॥ ೧೬ ॥

ಭಾವಗರ್ಭಸ್ಮಿತಂ ವಾಕ್ಯಂ ವಿಲಾಸಲಲಿತಾ ಗತಿಃ ।
ನಾಗರೀಣಾಮತೀವೈತತ್ಕಟಾಕ್ಷೇಕ್ಷಿತಮೇವ ತು ॥ ೧೭ ॥

ಗ್ರಾಮ್ಯೋ ಹರಿರಯಂ ತಾಸಾಂ ವಿಲಾಸನಿಗಡೈರ್ಯತಃ
ಭವತೀನಾಂ ಪುನಃ ಪಾರ್ಶ್ವಂ ಕಯಾ ಯುಕ್ತ್ಯಾ ಸಮೇಷ್ಯತಿ ॥ ೧೮ ॥

---

೧೪. ಈ ಕೃಷ್ಣನು ಮಥುರಾನಗರಕ್ಕೆ ಹೋದಮೇಲೆ ಗೋಕುಲಕ್ಕೆ ಹೇಗೆ ತಾನೇ ಹಿಂದಿರುಗುವನು? ಅಲ್ಲಿಯ ಸೊಬಗುಗಾತಿಯರ ಇಂಪಾದ ಮಾತುಗಳ ಮಾಧುರ್ಯವನ್ನು ಎರಡುಕಿವಿಗಳಿಂದಲೂ ಸವಿಯುವನು

೧೫. ಆ ನಗರದ ವಿಲಾಸಿನಿಯರ ಮಧುರವಾದ ಮಾತುಕತೆಗಳಲ್ಲಿ ತಲ್ಲೀನವಾದ ಆ ಕೃಷ್ಣನ ಮನಸ್ಸು ಹಳ್ಳಿಯಲ್ಲೇ ಹುಟ್ಟಿಬೆಳೆದ ನಮ್ಮಂತಹ ಗೋಪಗೋಪಿಯರ ಕಡೆ ಒಲಿಯುವುದೇ ?

೧೬. ಗೋಕುಲಕ್ಕೇ ಸಾರಭೂತನಾದ ಆ ಶ್ರೀಹರಿಯನ್ನು ಹೊರಕ್ಕೆ ಕರೆದೊಯ್ದು ಆ ದಯಾರಹಿತನಾದ ದುರ್ವಿಧಿಯು ಈ ಬಡಗೊಲ್ಲತಿಯರಮೇಲೆ ತನ್ನ ಪ್ರಹಾರವನ್ನು ಬೀಸಿದನು.

೧೭. ಆ ಶ್ರೀಹರಿಯು ಭಾವಗರ್ಭಿತವಾಗಿ ನಸುನಗುತ್ತಾ ಆಡುವ ಮಾತುಗಳೂ, ವಿಲಾಸದಿಂದ ಕೂಡಿದ ಆತನ ಮನೋಹರವಾದ ನಡಿಗೆಯೂ ಮತ್ತು ಆತನ ಕಣ್ಣಿನನೋಟವೂ ಆ ನಗರದ ಸ್ತ್ರೀಯರಿಗೆ ಬಹುವಾಗಿ ಮನ ಮೊಲಿಸುವುವು.

೧೮. ಹಳ್ಳಿಯಲ್ಲೇ ಹುಟ್ಟಿ ಬೆಳೆದ ಈ ಹರಿಯು ಒಂದುಸಲ ಆ ಪರ ಸ್ತ್ರೀಯರ ಹಾವಭಾವಗಳೆಂಬ ಶೃಂಖಲೆ (ಸರಪಳಿ) ಯಿಂದ ಬಂಧಿತನಾದರೆ ಆಮೇಲೆ ಹೇಗೆತಾನೇ ನಮ್ಮಬಳಿಗೆ ಹಿಂದಿರುಗಿ ಬಂದಾನು ?

ಏಷೋ ಹಿ ರಥಮಾರುಹ್ಯ ಮಥುರಾಂ ಯಾತಿ ಕೇಶವಃ ।
ಅಕ್ರೂರಕ್ರೂರಕೇಣಾಪಿ ಹತಾಶೇನ ಪ್ರತಾರಿತಃ ॥ ೧೯ ॥

ಕಿಂ ನ ವೇತ್ತಿ ನೃಶಂಸೋಽಯಮನುರಾಗಪರಂ ಜನಂ ।
ಯೇನೇಮಮಕ್ಷರಾಹ್ಲಾದಂ ನಯತ್ಯನ್ಯತ್ರ ನೋ ಹರಿಂ ॥ ೨೦ ॥

ಏಷ ರಾಮೇಣ ಸಹಿತಃ ಪ್ರಯಾತ್ಯತ್ಯಂತನಿರ್ಘೃಣಃ ।
ರಥಮಾರುಹ್ಯ ಗೋವಿಂದಸ್ತ್ವರ್ಯತಾಮಸ್ಯ ವಾರಣೇ ॥ ೨೧ ॥

ಗುರೂಣಾಮಗ್ರತೋ ವಕ್ತುಂ ಕಿಂ ಬ್ರವೀಷಿ ನ ನಃ ಕ್ಷಮಂ ।
ಗುರವಃ ಕಿಂ ಕರಿಷ್ಯಂತಿ ದಗ್ಧಾನಾಂ ವಿರಹಾಗ್ನಿನಾ ॥ ೨೨ ॥

---

೧೯. ಆ ದುಷ್ಟ ಅಕ್ರೂರನು ಈತನನ್ನು ಬೆಡಗಿನ ಮಾತುಗಳಿಂದ ಮರುಳುಗೊಳಿಸಿರುವನು. ನೋಡಿರಿ, ಇದೋ ಈ ಕೇಶಿಸೂದನನು ರಥವನ್ನೇರಿ ಮಧುರೆಗೆ ಹೊರಡುತ್ತಿರುವನು.

೨೦. ಈ ನೀಚನಿಗೆ ನಾವೆಲ್ಲರೂ ಆ ಶ್ರೀಕೃಷ್ಣನಲ್ಲಿ ಎಷ್ಟು ಅನುರಾಗವನ್ನು ಇಟ್ಟಿರುವೆವೆಂಬುದು ತಿಳಿಯದೇ? ಇಲ್ಲದಿದ್ದರೆ, ಶಾಶ್ವತವಾದ ಆನಂದವನ್ನು ನೀಡುವ ಆ ನಮ್ಮ ಹರಿಯನ್ನು ಈರೀತಿ ದೂರವಾಗಿ ಬೇರೊಂದುಕಡೆಗೆ ಕರೆದೊಯ್ಯುವನೇ?

೨೧. ಇದೋ, ಸ್ವಲ್ಪವೂ ದಯೆಯೆಂಬುದೇ ಇಲ್ಲದ ಈ ಶ್ರೀಕೃಷ್ಣನು ಬಲರಾಮನ ಜೊತೆಯಲ್ಲಿ ರಥವನ್ನೇರಿ ಹೊರಡುತ್ತಿರುವನು. ಬೇಗಬೇಗ, ನಡೆಯಿರಿ. ಹೋಗಿ ಈತನನ್ನು ತಡೆಯೋಣ.

೨೨. ಏನೆಂದೆ? ಹಿರಿಯರ ಮುಂದೆ ಈರೀತಿ ಮಾತನಾಡುವುದು ತರವಲ್ಲವೆಂದೆ? ಇರಲಿ, ವಿರಹವೆಂಬ ಅಗ್ನಿಯಿಂದ ಸುಟ್ಟುಹೋಗುತ್ತಿರುವ ನಮ್ಮನ್ನು ಹಿರಿಯರು ಏನುತಾನೇ ಮಾಡಬಲ್ಲರು?

ನಂದಗೋಪಮುಖಾ ಗೋಪಾ ಗಂತುಮೇತೇ ಸಮುದ್ಯತಾಃ ।
ನೋದ್ಯಮಂ ಕುರುತೇ ಕಶ್ಚಿದ್ಗೋವಿಂದವಿನಿವರ್ತನೇ ॥ ೨೩ ॥

ಸುಪ್ರಭಾತಾದ್ಯ ರಜನೀ ಮಥುರಾವಾಸಿಯೋಷಿತಾಂ ।
ಯಾಸಾಮಚ್ಯುತವಕ್ತ್ರಾಬ್ಜೇ ಯಾತಿ ನೇತ್ರಾಲಿಭೋಗ್ಯತಾಂ ॥ ೨೪ ॥

ಧನ್ಯಾಸ್ತೇ ಪಥಿ ಯೇ ಕೃಷ್ಣಮಿತೋ ಯಾಂತಮವಾರಿತಾಃ ।
ಉದ್ವಹಿಷ್ಯಂತಿ ಪಶ್ಯಂತಃ ಸ್ವದೇಹಂ ಪುಲಕಾಂಚಿತಂ ॥ ೨೫ ॥

ಮಥುರಾನಗರೀಪೌರನಯನಾನಾಂ ಮಹೋತ್ಸವಃ ।
ಗೋವಿಂದವದನಾಲೋಕಾದತೀವಾದ್ಯ ಭವಿಷ್ಯತಿ ॥ ೨೬ ॥

---

೨೩. ನೋಡಿ, ಈ ನಂದಗೋಪನೇ ಮೊದಲಾದ ಗೋಪಾಲಕರೆಲ್ಲರೂ ಹೊರಡಲು ಸಿದ್ಧವಾಗುತ್ತಿರುವರು. ಒಬ್ಬರೂ ಕೂಡ ಆ ಗೋವಿಂದನನ್ನು ಹಿಂದಿರುಗಿಸಲು ಪ್ರಯತ್ನವನ್ನೇ ಮಾಡುತ್ತಿಲ್ಲವಲ್ಲಾ.

೨೪. ಆ ಮಥುರಾನಗರ ನಿವಾಸಿಗಳಾದ ಹೆಂಗಸರೇ ಧನ್ಯರು, ಅವರೀಗ ಈದಿವಸ ಒಳ್ಳೆಯ ಹೆಳಗನ್ನು ಪಡೆದಿರುವರು. ಇಲ್ಲದಿದ್ದರೆ ಆ ಶ್ರೀಕೃಷ್ಣನ ಮುಖವೆಂಬ ಕಮಲದಲ್ಲಿ ಅವರ ನಯನಗಳು ದುಂಬಿಗಳಂತೆ ಇಂದು ಬಂದು ಎರಗುತ್ತವೆಯೇ ?

೨೫. ಯಾರು ಇಲ್ಲಿಂದ ಹೊರಡುತ್ತಿರುವ ಆ ಶ್ರೀಕೃಷ್ಣನನ್ನು ದಾರಿಯಲ್ಲಿ ಎಲ್ಲಾದರೂ ಒಂದುಕಡೆ, ಯಾವುದೊಂದು ವಿಧವಾದ ತಡೆಯೂ ಇಲ್ಲದೆ ಕಂಡು ತಮ್ಮ ಶರೀರದಲ್ಲೆಲ್ಲಾ ರೋಮಾಂಚನವನ್ನು ಹೊಂದುವರೋ ಅವರೇ ಧನ್ಯರು.

೨೬. ಈದಿನ ಮಥುರಾನಗರದ ಪಟ್ಟಣಿಗರ ಕಣ್ಣುಗಳಿಗೆ ಬಹುದೊಡ್ಡ ಹಬ್ಬವೊದಗಿರುವುದು. ಏಕೆಂದರೆ ಅವರು, ನಮ್ಮ ಗೋವಿಂದನ ವದನಾರವಿಂದವನ್ನು ಇಂದು ಕಾಣುವರು.

ಕೋ ನು ಸ್ವಪ್ನಃ ಸಭಾಗ್ಯಾಭಿರ್ದೃಷ್ಟಸ್ತಾಭಿರಧೋಕ್ಷಜಂ ।
ವಿಸ್ತಾರಿಕಾಂತನಯನಾ ಯಾ ದ್ರಕ್ಷ್ಯಂತ್ಯನಿವಾರಿತಂ ॥ ೨೭ ॥
ಅಹೋ ಗೋಪೀಜನಸ್ಯಾಸ್ಯ ದರ್ಶಯಿತ್ವಾ ಮಹಾನಿಧಿಂ ।
ಉದ್ಧೃತಾನ್ಯದ್ಯ ನೇತ್ರಾಣಿ ವಿಧಾತ್ರಾಕರುಣಾತ್ಮನಾ ॥ ೨೮ ॥
ಅನುರಾಗೇಣ ಶೈಥಿಲ್ಯಮಸ್ಮಾಸು ವ್ರಜತೋ ಹರೇಃ ।
ಶೈಥಿಲ್ಯಮುಪಯಾಂತ್ಯಾಶು ಕರೇಷು ವಲಯಾನ್ಯಪಿ ॥ ೨೯ ॥
ಅಕ್ರೂರಃ ಕ್ರೂರಹೃದಯಃ ಶೀಘ್ರಂ ಪ್ರೇರಯತೇ ಹಯಾನ್ ।
ಏವಮಾರ್ತಾಸು ಯೋಷಿತ್ಸು ಘೃಣಾ ಕಸ್ಯ ನ ಜಾಯತೇ ॥ ೩೦ ॥
ಹೇ ಹೇ ಕೃಷ್ಣ ರಥಸ್ಯೋಚ್ಚೈಶ್ಚಕ್ರರೇಣುರ್ನಿರೀಕ್ಷ್ಯತಾಂ ।
ದೂರೀಕೃತೋ ಹರಿರ್ಯೇನ ಸೋಽಪಿ ರೇಣುರ್ನ ಲಕ್ಷ್ಯತೇ ॥ ೩೧ ॥

---

೨೭. ಆ ಭಾಗ್ಯಶಾಲಿನಿಯರು ಈದಿನ ಬೆಳಗ್ಗೆ ಎಂತಹ ಶುಭಸ್ವಪ್ನವನ್ನು ನೋಡಿರಬಹುದು? ಏಕೆಂದರೆ ಅವರು ಯಾವ ವಿಧವಾದ ತಡೆಯೂ ಇಲ್ಲದೆ ಆ ಅಧೋಕ್ಷಜನನ್ನು ಅರಳಿದ ಕಂಗಳಿಂದ ನೋಡುವರಲ್ಲವೇ ?

೨೮. ಅಯ್ಯೋ! ಆ ಕರುಣಾಶೂನ್ಯನಾದ ವಿಧಿಯು, ಗೋಪಸ್ತ್ರೀಯರಿಗೆ ಭಾರಿ ನಿಧಿಯೊಂದನ್ನು ತೋರಿಸಿಬಿಟ್ಟು ಈಗ ಅವರ ಕಣ್ಣುಗಳನ್ನು ಅದರಿಂದ ಮತ್ತೊಂದೆಡೆಗೆ ನೂಕುತ್ತಿರುವನು.

೨೯. ಆ ಕೃಷ್ಣನ ಅನುರಾಗವು ನಮ್ಮಲ್ಲಿ ಸಡಿಲವಾದ ಹಾಗೆಲ್ಲಾ ಆ ಅನುರಾಗದೊಡನೆ ನಮ್ಮ ಬಳೆಗಳೂ ಕೂಡ ಸಡಿಲವಾಗಿ ನಮ್ಮ ಕೈಗಳಲ್ಲಿ ನಿಲ್ಲದೆ ಹೋಗುತ್ತಿರುವುವು.

೩೦. ಆ ಕ್ರೂರಹೃದಯನಾದ ಅಕ್ರೂರನು ಬೇಗಬೇಗನೆ ಕುದುರೆಗಳನ್ನೋಡಿಸುತ್ತಿರುವನು. ಈರೀತಿ ಗೋಳಿಡುತ್ತಿರುವ ಹೆಂಗಸರನ್ನು ಕಂಡತೆ ಯಾರಿಗೆತಾನೇ ಮರುಕವುಂಟಾಗದಿದ್ದೀತು ?

೩೧. ಎಲೈ ಎಲೈ, ಆ ಕೃಷ್ಣನ ತೇರಿನ ಚಕ್ರಗಳಿಂದ ಬಹು ಎತ್ತರದವರೆಗೂ ಎದ್ದ ಧೂಳನ್ನು ನೋಡಿರಿ. ಅಯ್ಯೋ, ಆ ಶ್ರೀಕೃಷ್ಣನನ್ನು ಮರೆಮಾಡಿದ ಆ ಧೂಳು ಸಹ ಈಗ ಕಣ್ಣಿಗೆ ಕಾಣುವುದಿಲ್ಲವಲ್ಲಾ.

ಇತ್ಯೇವಮತಿಹಾರ್ದೇನ ಗೋಪೀಜನನಿರೀಕ್ಷಿತಃ ।
ತತ್ಯಾಜ ವ್ರಜಭೂಭಾಗಂ ಸಹ ರಾಮೇಣ ಕೇಶವಃ ॥ ೩೨ ॥
ಗಚ್ಛಂತೋ ಜವನಾಶ್ವೇನ ರಥೇನ ಯಮುನಾತಟಂ ।
ಪ್ರಾಪ್ತಾ ಮಧ್ಯಾಹ್ನಸಮಯೇ ರಾಮಾಕ್ರೂರಜನಾರ್ದನಾಃ ॥ ೩೩ ॥
ಅಥಾಹ ಕೃಷ್ಣಮಕ್ರೂರೋ ಭವದ್ಭ್ಯಾಂ ತಾವದಾಸ್ಯತಾಂ ।
ಯಾವತ್ಕರೋಮಿ ಕಾಲಿಂದ್ಯಾಮಾಹ್ನಿಕಾರ್ಹಣಮಂಭಸಿ ॥ ೩೪ ॥
ತಥೇತ್ಯುಕ್ತೇ ತತಃ ಸ್ನಾತಃ ಸ್ವಾಚಾಂತಃ ಸ ಮಹಾಮತಿಃ ।
ದಧ್ಯೌ ಬ್ರಹ್ಮ ಪರಂ ವಿಪ್ರಾಃ ಪ್ರವಿಶ್ಯ ಯಮುನಾಜಲೇ ॥ ೩೫ ॥
ಫಣಾಸಹಸ್ರಮಾಲಾಢ್ಯಂ ಬಲಭದ್ರಂ ದದರ್ಶ ಸಃ ।
ಕುಂದಾಮಲಾಂಗಮುನ್ನಿದ್ರಪದ್ಮಪತ್ರಾಯತೇಕ್ಷಣಂ ॥ ೩೬ ॥

---

೩೨. ಈರೀತಿಯಾಗಿ ಪ್ರೇಮಾತಿಶಯದಿಂದ ಗೋಪಿಕಾಸ್ತ್ರೀಯರೆಲ್ಲರೂ ನೋಡುತ್ತಿರುವ ಹಾಗೆಯೇ, ಆ ಶ್ರೀಕೃಷ್ಣನು ಬಲರಾಮನೊದನೆ ಆ ಗೋಕುಲದ ಎಲ್ಲೆಯನ್ನು ದಾಟಿದನು.

೩೩. ಅನಂತರ ಆ ಬಲರಾಮ, ಕೃಷ್ಣ ಅಕ್ರೂರರು ಬಹು ವೇಗವಾಗಿ ಓಡುತ್ತಿರುವ ಆ ತೇರಿನಲ್ಲಿ ಕುಳಿತು, ಮಧ್ಯಾನ್ಹದವೇಳೆಗೆ ಯಮುನಾನದಿಯ ತೀರವನ್ನು ತಲುಪಿದರು.

೩೪. ಆಗ, ಕೃಷ್ಣ ಬಲರಾಮರನ್ನು ಕುರಿತು ಅಕ್ರೂರನು ನೀವು ಸ್ವಲ್ಪ ಕುಳಿತು ವಿಶ್ರಮಿಸಿಕೊಳ್ಳಿರಿ. ಅಷ್ಟರಲ್ಲಿ ಯಮುನಾನದಿಯಲ್ಲಿಳಿದು ಆಹ್ನಿಕವನ್ನು ನೆರವೇರಿಸುವೆನು ಎಂದನು.

೩೫. ಎಲೈ ದ್ವಿಜೋತ್ತಮರೇ, ಅವರು ಹಾಗೆಯೇ ಆಗಲಿ ಎನ್ನುತ್ತಲೇ, ಆ ಮಹಾಜ್ಞಾನಿಯು ಯಮುನಾನದಿಯಲ್ಲಿಳಿದು ಸ್ನಾನಮಾಡಿದನಂತರ ಆಚಮನವನ್ನುಮಾಡಿ, ಪರಾತ್ಪರವಸ್ತುವನ್ನು ಧ್ಯಾನಮಾಡತೊಡಗಿದನು

೩೬. ಆಗ ಅವನ ಕಣ್ಣುಗಳಿಗೆ ಬಲರಾಮನು ಸಾವಿರ ಹೆಡೆಗಳಿಂದ ಕೂಡಿರುವ ಆದಿಶೇಷನಾಗಿ ತೋರಿದನು. ಅವನ ಮೈಯು ಕುಂದಪುಷ್ಪದಂತೆ ಶುಭ್ರವಾಗಿ ಶೋಭಿಸುತ್ತಿತ್ತು. ಅವನ ವಿಸ್ತಾರವಾದ ಕಂಗಳು ಕಮಲದಲವನ್ನು ಹೋಲುತ್ತಿದ್ದುವು.

ವೃತಂ ವಾಸುಕಿಡಿಂಭೌಘೈರ್ಮಹದ್ಭಿಃ ಪವನಾಶಿಭಿಃ ।
ಸಂಸ್ತೂಯಮಾನಮುದ್ಗಂಧಿವನಮಾಲಾವಿಭೂಷಿತಂ ॥ ೩೭ ॥

ದಧಾನಮಸಿತೇ ವಸ್ತ್ರೇ ಚಾರುರೂಪಾವತಂಸಕಂ ।
ಚಾರುಕುಂಡಲಿನಂ ಮತ್ತಮಂತರ್ಜಲತಲೇ ಸ್ಥಿತಂ ॥ ೩೮ ॥

ತಸ್ಯೋತ್ಸಂಗೇ ಘನಶ್ಯಾಮಮಾತಾಮ್ರಾಯತಲೋಚನಂ ।
ಚತುರ್ಬಾಹುಮುದಾರಾಂಗಂ ಚಕ್ರಾದ್ಯಾಯುಧಭೂಷಣಂ ॥ ೩೯ ॥

ಪೀತೇ ವಸಾನಂ ವಸನೇ ಚಿತ್ರಮಾಲ್ಯವಿಭೂಷಿತಂ ।
ಶಕ್ರಚಾಪತಡಿನ್ಮಾಲಾವಿಚಿತ್ರಮಿವ ತೋಯದಂ ॥ ೪೦ ॥

---

೩೭. ಅವನ ಸುತ್ತಲೂ ವಾಸುಕಿಯ ಮಕ್ಕಳಾದ ಭಾರಿಭಾರಿ ಸರ್ಪಗಳು ಸಾಲುಗಟ್ಟಿಕೊಂಡು ಸ್ತೋತ್ರಮಾಡುತ್ತಿದ್ದುವು. ಸುವಾಸನಾಭರಿತವಾದ ವನಮಾಲೆಯು ಅವನ ಕಂಠವನ್ನು ಅಲಂಕರಿಸಿದ್ದಿತು.

೩೮. ಆತನು ನೀಲವಾದ ವಸ್ತ್ರಗಳೆರಡನ್ನು ಧರಿಸಿದ್ದನು. ಅವನು ಧರಿಸಿದ್ದ ಅವತಂಸವೂ, ಕುಂಡಲಗಳೂ ಮನೋಹರವಾಗಿದ್ದುವು. ಇಂತಹ ಆ ಆದಿಶೇಷನು ನೀರಿನ ನಡುವೆ ಇರುವಂತೆ ತೋರಿತು.

೩೯. ಆ ಆದಿಶೇಷನ ಮೇಲೆ ಶ್ರೀಕೃಷ್ಣನು ಇರುವಂತೆ ತೋರಿತು. ಅವನು ಮೋಡದಂತೆ ಕಪ್ಪಾಗಿದ್ದನು. ಕಣ್ಣುಗಳು ವಿಸ್ತಾರವಾಗಿಯೂ ತುದಿಯಲ್ಲಿ ನಸುಗೆಂಪಾಗಿಯೂ ಇದ್ದವು. ಆತನಿಗೆ ನಾಲ್ಕು ಕೈಗಳು. ಅವುಗಳಲ್ಲಿ ಸುದರ್ಶನಚಕ್ರ ಮೊದಲಾದ ಆಯುಧಗಳು ಇದ್ದುವು. ಆತನ ದೇಹವು ನೀಳವಾಗಿತ್ತು.

೪೦. ಆತನು ಪೀತಾಂಬರಗಳನ್ನುಟ್ಟು, ಬಣ್ಣಬಣ್ಣದ ಹೂಗಳನ್ನು ಕಟ್ಟಿದ್ದ ಮಾಲೆಯನ್ನು ಧರಿಸಿದ್ದನು. ಆಗ ಆತನು, ಕಾಮನ ಬಿಲ್ಲು, ಮಿಂಚಿನ ಬಳ್ಳಿಗಳಿಂದ ರಾರಾಜಿಸುತ್ತಿರುವ ಕಾರ್ಗಾಲ ಮೋಡದಂತೆ ತೋರುತ್ತಿದ್ದನು.

ಶ್ರೀವತ್ಸವಕ್ಷಸಂ ಚಾರುಕೇಯೂರಮುಕುಟೋಜ್ಜ್ವಲಂ ।
ದದರ್ಶ ಕೃಷ್ಣಮಕ್ಲಿಷ್ಟಂ ಪುಂಡರೀಕಾವತಂಸಕಂ ॥ ೪೧ ॥

ಸನಂದನಾದ್ಯೈರ್ಮುನಿಭಿಃ ಸಿದ್ಧಯೋಗೈರಕಲ್ಮಷೈಃ ।
ಸಂಚಿಂತ್ಯಮಾನಂ ಮನಸಾ ನಾಸಾಗ್ರನ್ಯಸ್ತಲೋಚನೈಃ ॥ ೪೨ ॥

ಬಲಕೃಷ್ಣೌ ತದಾಕ್ರೂರಃ ಪ್ರತ್ಯಭಿಜ್ಞಾಯ ವಿಸ್ಮಿತಃ ।
ಅಚಿಂತಯದಥೋ ಶೀಘ್ರಂ ಕಥಮತ್ರಾಗತಾವಿತಿ ॥ ೪೩ ॥

ವಿವಕ್ಷೋಃ ಸ್ತಂಭಯಾಮಾಸ ವಾಚಂ ತಸ್ಯ ಜನಾರ್ದನಃ ।
ತತೋ ನಿಷ್ಕ್ರಮ್ಯ ಸಲಿಲಾದ್ರಥಮಭ್ಯಾಗತಃ ಪುನಃ ॥ ೪೪ ॥

ದದರ್ಶ ತತ್ರ ಚೈವೋಭೌ ರಥಸ್ಯೋಪರಿ ಸಂಸ್ಥಿತೌ ।
ರಾಮಕೃಷ್ಣೌ ಯಥಾ ಪೂರ್ವಂ ಮನುಷ್ಯವಪುಷಾನ್ವಿತೌ ॥ ೪೫ ॥

---

೪೧. ಶ್ರೀವತ್ಸವೆಂಬ ಮಚ್ಚೆಯು ಆತನ ಎದೆಯನ್ನು ಅಲಂಕರಿಸಿದ್ದಿತು. ಸೊಗಸಾದ ತೋಳುಬಳೆ, ಕಿರೀಟಗಳು ಆತನ ಬಾಹು ಯುಗ್ಮದಲ್ಲಿಯೂ ತಲೆಯಮೇಲೂ ಮೆರೆಯುತ್ತಿದ್ದವು ಮತ್ತು ಬಿಳಿದಾವರೆಯೊಂದು ಅವತಂಸ ವಾಗಿ ಶೋಭಿಸುತ್ತಿತ್ತು.

೪೨. ಆತನನ್ನು ಶುದ್ಧಚರಿತ್ರರೂ, ಯೋಗಸಿದ್ಧಿಯನ್ನು ಪಡೆದವರೂ ಆದ ಸನಕಾದಿ ಮಹರ್ಷಿಗಳು, ನಾಸಾಗ್ರದಲ್ಲಿ ನೆಟ್ಟ ದೃಷ್ಟಿಯುಳ್ಳವರಾಗಿ ಮನಸ್ಸಿನಲ್ಲಿ ಭಾವಿಸುತ್ತಿದ್ದರು.

೪೩. ಆಗ ಅಕ್ರೂರನು ಬಲರಾಮನನ್ನೂ ಕೃಷ್ಣನನ್ನೂ ಗುರುತು ಹಿಡಿದು ಬಹು ಆಶ್ಚರ್ಯವನ್ನು ತಾಳಿ ಇಷ್ಟುಬೇಗನೆ ಇವರಿಲ್ಲಿಗೆ ಹೇಗೆ ಬಂದರು ಎಂದು ಚಿಂತಿಸತೊಡಗಿದನು.

೪೪. ಆಗ ಅವನು ಏನೋ ಹೇಳಬೇಕೆಂದಿದ್ದನು. ಆದರೆ ಆ ಜನಾರ್ದನನು ಅವನ ಮಾತು ಹೊರಡದಂತೆ ಅದನ್ನು ಸ್ತಂಭನಗೊಳಿಸಿದನು. ಅನಂತರ ಅಕ್ರೂರನು ನೀರಿನಿಂದ ಮೇಲಕ್ಕೆ ಬಂದು ರಥದ ಬಳಿಗೆ ಹಿಂದಿರುಗಿದನು.

೪೫. ಅಲ್ಲಿ ಬಂದುನೋಡುತ್ತಲೇ ಬಲರಾಮನೂ ಕೃಷ್ಣನೂ ಮೊದಲಿನಂತೆಯೇ ಮನುಷ್ಯದೇಹಧಾರಿಗಳಾಗಿ ಆ ರಥದ ಮೇಲೆ ಕುಳಿತಿದ್ದುದು ಕಾಣಬಂದಿತು.

ನಿಮಗ್ನಶ್ಚ ಪುನಸ್ತೋಯೇ ದದೃಶೇ ಸ ತಥೈವ ತೌ ।
ಸಂಸ್ತೂಯಮಾನೌ ಗಂಧರ್ವೈರ್ಮುನಿಸಿದ್ಧಮಹೋರಗೈಃ ॥ ೪೬ ॥

ತತೋ ವಿಜ್ಞಾತಸದ್ಭಾವಃ ಸ ತು ದಾನಪತಿಸ್ತದಾ ।
ತುಷ್ಟಾವ ಸರ್ವವಿಜ್ಞಾನಮಯಮಚ್ಯುತಮೀಶ್ವರಂ ॥ ೪೭ ॥

॥ ಅಕ್ರೂರ ಉವಾಚ ॥

ತನ್ಮಾತ್ರರೂಪಿಣೇಽಚಿಂತ್ಯಮಹಿಮ್ನೇ ಪರಮಾತ್ಮನೇ ।
ವ್ಯಾಪಿನೇ ನೈಕರೂಪೈಕಸ್ವರೂಪಾಯ ನಮೋ ನಮಃ ೪೮

ಶಬ್ದರೂಪಾಯ ತೇಽಚಿಂತ್ಯಹವಿರ್ಭೂತಾಯ ತೇ ನಮಃ
ನಮೋ ವಿಜ್ಞಾನರೂಪಾಯ ಪರಾಯ ಪ್ರಕೃತೇಃ ಪ್ರಭೋ ॥ ೪೯

ಭೂತಾತ್ಮಾ ಚೇಂದ್ರಿಯಾತ್ಮಾ ಚ ಪ್ರಧಾನಾತ್ಮಾ ತಥಾ ಭವಾನ್ ।
ಆತ್ಮಾ ಚ ಪರಮಾತ್ಮಾ ಚ ತ್ವಮೇಕಃ ಪಂಚಧಾ ಸ್ಥಿತಃ ॥ ೫೦ ॥

---

೪೬. ಆಗ ಅಕ್ರೂರನು ಮರಳಿ ಯಮುನಾನದಿಗೆ ಹೋಗಿ ಅಲ್ಲಿ ಮುಳುಗಿ ಧ್ಯಾನಮಾಡತೊಡಗಲು, ಆ ರಾಮಕೃಷ್ಣರು, ಗಂಧರ್ವರು, ಸಿದ್ಧರೂ ಪನ್ನಗರೂ, ಮುನಿಗಳೂ ಇವರುಗಳಿಂದ ಸ್ತುತಿಸಲ್ಪಡುತ್ತಾ ದಿವ್ಯವಾದ ರೂಪ ದಲ್ಲಿರುವುದನ್ನು ಕಂಡನು.

೪೭. ಆಗ ಆ ದಾನಪತಿಯಾದ ಅಕ್ರೂರನು ನಿಜಾಂಶವನ್ನು ತಿಳಿದವ ನಾಗಿ, ಸಕಲ ಜ್ಞಾನಸ್ವರೂಪನಾದ, ಆ ಪರಮಪುರುಷನನ್ನು ಸ್ತೋತ್ರಮಾಡ ತೊಡಗಿದನು.

೪೮. ತನ್ಮಾತ್ರಗಳಸ್ವರೂಪನೂ, ಊಹೆಗೂ ನಿಲುಕದಮಹಿಮಾನ್ವಿ ತನೂ, ಸರ್ವವ್ಯಾಪಿಯೂ, ನಾನಾರೂಪಧಾರಿಯೂ ಆದ ನಿನಗೆ ಮತ್ತೆಮತ್ತೆ ನಮಸ್ಕಾರವು.

೪೯. ಎಲೈ ಪ್ರಭುವೇ, ಶಬ್ದಸ್ವರೂಪನೂ, ಅಚಿಂತ್ಯವಾದ ಹವಿಃ ಸ್ವರೂಪನೂ, ವಿಜ್ಞಾನಮಯನೂ, ಪ್ರಕೃತಿಗಿಂತಲೂ ಪರನೆನಿಸಿದವನೂ ಆದ ನಿನಗೆ ನಮಸ್ಕಾರವು.

೫೦. ನೀನು ಪಂಚಭೂತಸ್ವರೂಪನೂ, ಪಂಚೇಂದ್ರಿಯಗಳೂ, ಪ್ರಧಾ ನವೂ, (ಪ್ರಕೃತಿಯು), ಆತ್ಮನೂ, ಪರಮಾತ್ಮನೂ, ಆಗಿರುವೆ. ಹೀಗೆ ನೀನೊಬ್ಬನೇ ಐದು ರೂಪಗಳನ್ನು ತಾಳಿರುವೆ.

ಪ್ರಸೀದ ಸರ್ವಧರ್ಮಾತ್ಮನ್ಕ್ಷರಾಕ್ಷರ ಮಹೇಶ್ವರ ।
ಬ್ರಹ್ಮವಿಷ್ಣುಶಿವಾದ್ಯಾಭಿಃ ಕಲ್ಪನಾಭಿರುದೀರಿತಃ ॥ ೫೧ ॥

ಅನಾಖ್ಯೇಯಸ್ವರೂಪಾತ್ಮನ್ನನಾಖ್ಯೇಯಪ್ರಯೋಜನ ।
ಅನಾಖ್ಯೇಯಾಭಿಧಾನ ತ್ವಾಂ ನತೋಽಸ್ಮಿ ಪರಮೇಶ್ವರಂ ॥ ೫೨ ॥

ನ ಯತ್ರ ನಾಥ ವಿದ್ಯಂತೇ ನಾಮಜಾತ್ಯಾದಿಕಲ್ಪನಾಃ ।
ತದ್ಬ್ರಹ್ಮ ಪರಮಂ ನಿತ್ಯಮವಿಕಾರಿ ಭವಾನಜಃ ॥ ೫೩ ॥

ನ ಕಲ್ಪನಾಮೃತೇಽರ್ಥಸ್ಯ ಸರ್ವಸ್ಯಾಧಿಗಮೋ ಯತಃ ।
ತತಃ ಕೃಷ್ಣಾಚ್ಯುತಾನಂತ ವಿಷ್ಣುಸಂಜ್ಞಾಭಿರೀಡ್ಯಸೇ ॥ ೫೪ ॥

೫೧. ಬ್ರಹ್ಮನೆಂತಲೂ, ವಿಷ್ಣುವೆಂತಲೂ, ಶಿವನೆಂಬುದಾಗಿಯೂ ಇವೇ ಮೊದಲಾಗಿ ಇನ್ನೂ ಅನೇಕ ಕಲ್ಪನೆಗಳಿಂದಲೂ ಪ್ರತಿಪಾದಿಸಲ್ಪಡುವ ಎಲೈ ಮಹೇಶ್ವರನೇ, ಪ್ರಸನ್ನನಾಗು. ಸರ್ವಧರ್ಮಸ್ವರೂಪನೂ, ಕ್ಷರನೂ, ಅಕ್ಷರನೂ ಎನಿಸಿದ ಎಲೈ ಸ್ವಾಮಿಯೇ, ಪ್ರಸನ್ನತೆಯನ್ನು ತೋರು.

೫೨. ಎಲೈ ಪರಮೇಶ್ವರನೇ, ನಿನ್ನ ಸ್ವರೂಪವನ್ನು ಹೀಗೆಂದು ನುಡಿಯಲು ಯಾರಿಗೂ ಸಾಧ್ಯವಿಲ್ಲ. ಅದೇರೀತಿ ನಿನ್ನಿಂದ ಜಗತ್ತಿಗೆ ಆಗುವ ಉಪಕಾರಗಳನ್ನೂ ಹೇಳಲು ಅಸದಳವು. ಹಾಗೆಯೇ ನಿನ್ನ ನಾಮಗಳನ್ನು (ಹೆಸರು) ಇಷ್ಟೆಂದು ಹೇಳಲು ಸಾಧ್ಯವಿಲ್ಲ. ಇಂತಹ ನಿನ್ನನ್ನು ನಾನು ನಮಸ್ಕರಿಸುವೆನು.

೫೩. ಎಲೈ ಪ್ರಭುವೇ, ಜಾತಿ ಮೊದಲಾದ ಕಲ್ಪನೆಗಳು ಎಲ್ಲಿ ಇಲ್ಲದಂತಾಗುವುವೋ, ಹುಟ್ಟುಸಾವುಗಳಿಲ್ಲದವನೂ, ವಿಕಾರರಹಿತನೂ ನಿತ್ಯನೂ ಆದ ಆ ಪರಬ್ರಹ್ಮವಸ್ತುವು ನೀನೇ.

೫೪. ಈ ಜಗತ್ತಿನಲ್ಲಿ ಯಾವ ವಸ್ತುವೇ ಆಗಲಿ ಅದಕ್ಕೆ ಒಂದು ಕಲ್ಪನೆ (ಸಂಕೇತ ಹೆಸರು) ಇಲ್ಲದಿದ್ದರೆ ಆ ವಸ್ತುವಿನ ತಿಳಿವಳಿಕೆಯು ಆಗುವುದಿಲ್ಲ. ಆದುದರಿಂದ ನೀನು ಕೃಷ್ಣ, ಅಚ್ಯುತ, ಅನಂತ, ವಿಷ್ಣು ಮೊದಲಾದ ಸಂಕೇತಗಳಿಂದ ಕೀರ್ತಿಸಲ್ಪಡುತ್ತಿರುವೆ.

ಸರ್ವಾತ್ಮಂಸ್ತ್ವಮಜ ವಿಕಲ್ಪನಾಭಿರೇತೈ-
ರ್ದೇವಾಸ್ತ್ವಂ ಜಗದಖಿಲಂ ತ್ವಮೇವ ವಿಶ್ವಂ ।
ವಿಶ್ವಾತ್ಮಂಸ್ತ್ವಮತಿವಿಕಾರಭೇದಹೀನಃ
ಸರ್ವಸ್ಮಿನ್ನ ಹಿ ಭವತೋಽಸ್ತಿ ಕಿಂಚಿದನ್ಯತ್ ॥ ೫೫ ॥

ತ್ವಂ ಬ್ರಹ್ಮಾ ಪಶುಪತಿರರ್ಯಮಾ ವಿಧಾತಾ
ತ್ವಂ ಧಾತಾ ತ್ರಿದಶಪತಿಃ ಸಮೀರಣೋಽಗ್ನಿಃ ।
ತೋಯೇಶೋ ಧನಪತಿರಂತಕಸ್ತ್ವಮೇಕೋ
ಭಿನ್ನಾತ್ಮಾ ಜಗದಪಿ ಪಾಸಿ ಶಕ್ತಿಭೇದೈಃ ॥ ೫೬ ॥

ವಿಶ್ವಂ ಭವಾನ್ಸೃಜತಿ ಹಂತಿ ಗಭಸ್ತಿರೂಪೋ
ವಿಶ್ವಂ ಚ ತೇ ಗುಣಮಯೋಽಯಮಜ ಪ್ರಪಂಚಃ ।
ರೂಪಂ ಪರಂ ಸದಿತಿವಾಚಕಮಕ್ಷರಂ ಯ-
ಜ್ಜ್ಞಾನಾತ್ಮನೇ ಸದಸತೇ ಪ್ರಣತೋಽಸ್ಮಿ ತಸ್ಮೈ ॥ ೫೭ ॥

---

೫೫. ಎಲೈ ಜನ್ಮರಹಿತನಾದ ಸ್ವಾಮಿಯೇ, ಅನಂತನಾಮಗಳಿಂದ ಬೇರೆಬೇರೆಯಾಗಿ ತೋರುವ ಎಲ್ಲ ವಸ್ತುಗಳೂ, ದೇವತೆಗಳೂ, ಈ ಸಮಸ್ತ ಪ್ರಪಂಚವೂ ನೀನೇ. ಎಲೈ ವಿಶಾತ್ಮ, ನೀನು ವಿಕಾರರಹಿತನು, ಭೇದವರ್ಜಿತನು. ಇವೆಲ್ಲದರಲ್ಲಿಯೂ ನೀನಲ್ಲದೆ ಬೇರೆಯಾದ ಮತ್ತೊಂದು ವಸ್ತುವು ಇಲ್ಲ.

೫೬. ನೀನೇ ಪರಬ್ರಹ್ಮನು, ಶಿವನು, ಸೂರ್ಯನು, ವಿಧಾತೃವು ಧಾತೃವು. ದೇವತೆಗಳೆಲ್ಲರಿಗೂ ಅಧಿಪತಿಯಾದ ಇಂದ್ರನೂ, ವಾಯುವೂ. ಅಗ್ನಿಯೂ, ಜಲಾಧಿಪತಿಯಾದ ವರುಣನೂ, ಧನೇಶ್ವರನಾದ ಕುಬೇರನೂ ಎಲ್ಲರನ್ನೂ ಕೊನೆಗಾಣಿಸುವ ಅಂತಕನೂ ಆಗಿರುವೆ. ಎಲೈ ಪ್ರಭುವೇ, ನೀನು ವಸ್ತುತಃ ಏಕೈಕಪುರುಷನೇ ಆಗಿದ್ದರೂ ಶಕ್ತಿಗಳ ಭೇದ (ವ್ಯತ್ಯಾಸ) ದಿಂದ ಬೇರೆಬೇರೆ ರೂಪವನ್ನು ತಾಳಿ ಈ ಜಗತ್ತನ್ನು ಸಲಹುತ್ತಿರುವೆ.

೫೭. ಎಲೈ ಜನ್ಮವರ್ಜಿತನೇ, ಈ ಪ್ರಪಂಚವನ್ನು ನೀನೇ ಸೃಷ್ಟಿಸುವೆ. ನೀನೇ ಇದನ್ನು ಗಭಸ್ತಿಸ್ವರೂಪದಿಂದ ಸಂಹರಿಸಿಯೂ ಬಿಡುವೆ. ಈ ಪ್ರಪಂಚವೆಲ್ಲವೂ ನಿನ್ನ ಗುಣಗಳಿಂದಲೇ (ಸತ್ತ್ವರಜಸ್ತಮಸ್) ಆದುದಾಗಿದೆ. ಯಾವ

**ಓಂ ನಮೋ ವಾಸುದೇವಾಯ ನಮಃ ಸಂಕರ್ಷಣಾಯ ಚ ।**
**ಪ್ರದ್ಯುಮ್ನಾಯ ನಮಸ್ತುಭ್ಯಮನಿರುದ್ಧಾಯ ತೇ ನಮಃ ॥ ೫೮ ॥**

**॥ ವ್ಯಾಸ ಉವಾಚ ॥**

**ಏವಮಂತರ್ಜಲೇ ಕೃಷ್ಣಮಭಿಷ್ಟೂಯ ಸ ಯಾದವಃ ।**
**ಅರ್ಚಯಾಮಾಸ ಸರ್ವೇಶಂ ಧೂಪಪುಷ್ಪೈರ್ಮನೋಮಯೈಃ ॥ ೫೯ ॥**

**ಪರಿತ್ಯಜ್ಯಾನ್ಯವಿಷಯಂ ಮನಸ್ತತ್ರ ನಿವೇಶ್ಯ ಸಃ ।**
**ಬ್ರಹ್ಮಭೂತೇ ಚಿರಂ ಸ್ಥಿತ್ವಾ ವಿರರಾಮ ಸಮಾಧಿತಃ ॥ ೬೦ ॥**

**ಕೃತಕೃತ್ಯಮಿವಾತ್ಮಾನಂ ಮನ್ಯಮಾನೋ ದ್ವಿಜೋತ್ತಮಾಃ ।**
**ಆಜಗಾಮ ರಥಂ ಭೂಯೋ ನಿರ್ಗಮ್ಯ ಯಮುನಾಂಭಸಃ ॥ ೬೧ ॥**

---

ಪರಮಸ್ವರೂಪವನ್ನು ಸತ್ ಎಂಬುದಾಗಿಯೂ ಅಕ್ಷರ (ನಾಶವಿಲ್ಲದುದು) ವೆಂಬದಾಗಿಯೂ; ಕರೆಯವರೋ ಅಂತಹ ಜ್ಞಾನಾತ್ಮಕನೂ, ಸದಸದ್ರೂಪನೂ ಆದ ನಿನಗೆ ನಾನು ನಮಸ್ಕರಿಸುವೆನು.

೫೮. ಎಲೈ ವಾಸುದೇವನೇ, ನಿನಗೆ ನಮಸ್ಕಾರವು. ಎಲೈ ಸಂಕರ್ಷಣನೇ, ನಿನಗೆ ನಮಸ್ಕಾರವು. ಓ ಪ್ರದ್ಯುಮ್ನಾ ನಿನ್ನನ್ನು ನಮಿಸುವೆನು. ಎಲೈ ಅನಿರುದ್ಧನೇ, ನಿನಗೆ ನಮಸ್ಕಾರವನ್ನು ಮಾಡುವೆನು.

೫೯-೬೦. ಹೀಗೆ ಆ ಯಾದವಕುಲದ ಅಕ್ರೂರನು ನೀರಿನ ನಡುವೆ ನಿಂತುಕೊಂಡು ಶ್ರೀಕೃಷ್ಣನನ್ನು ಸ್ತೋತ್ರಮಾಡಿ, ಮನಸ್ಸಿನಲ್ಲಿಯೇ ಕಲ್ಪಿತವಾದ ಧೂಪ, ದೀಪ, ಪುಷ್ಪಾದಿಗಳಿಂದ ಆತನನ್ನು ಪೂಜಿಸಿದನು. ಬಳಿಕ ಆತನು ಸಮಾಧಿಯಲ್ಲಿ ಮಗ್ನನಾಗಿ, ಬೇರೊಂದು ವಿಷಯದಲ್ಲಿ ಮನಸ್ಸು ಪ್ರವರ್ತಿಸದಂತೆ ಅದನ್ನು ನಿಗ್ರಹಿಸಿ, ಪರಬ್ರಹ್ಮಸ್ವರೂಪನಾದ ಆ ಶ್ರೀಕೃಷ್ಣನಲ್ಲೇ ಬಹುಕಾಲ ತನ್ನ ಮನಸ್ಸನ್ನು ನೆಲೆಗೊಳಿಸಿದ್ದು, ಅನಂತರ ಬಹಿರ್ಮುಖನಾದನು.

೬೧. ಎಲೈ ಬ್ರಾಹ್ಮಣಶ್ರೇಷ್ಠರೇ, ಆ ಅಕ್ರೂರನು ತಾನೀಗ ಕೃತಕೃತ್ಯನಾದೆನೆಂದು ಬಗೆಯುತ್ತಾ ಆ ಯಮುನಾನದಿಯ ನೀರಿನ ಮಧ್ಯದಿಂದೆದ್ದು ಮರಳಿ ಆ ರಥದ ಬಳಿಗೆ ಬಂದನು.

ರಾಜ್ಞಃ ಕೃಷ್ಣೌ ದದರ್ಶಾಥ ಯಥಾಪೂರ್ವಮವಸ್ಥಿತೌ ।
ವಿಸ್ಮಿತಾಕ್ಷಂ ತದಾಕ್ರೂರಂ ತಂ ಚ ಕೃಷ್ಣೋಽಭ್ಯಭಾಷತ ॥ ೬೨ ॥

॥ ಶ್ರೀಕೃಷ್ಣ ಉವಾಚ ॥

ಕಿಂ ತ್ವಯಾ ದೃಷ್ಟಮಾಶ್ಚರ್ಯಮಕ್ರೂರ ಯಮುನಾಜಲೇ ।
ವಿಸ್ಮಯೋತ್ಫುಲ್ಲನಯನೋ ಭವಾನ್ಸಂಲಕ್ಷ್ಯತೇ ಯತಃ ॥ ೬೩ ॥

॥ ಅಕ್ರೂರ ಉವಾಚ ॥

ಅಂತರ್ಜಲೇ ಯದಾಶ್ಚರ್ಯಂ ದೃಷ್ಟಂ ತತ್ರ ಮಯಾಚ್ಯುತ ।
ತದತ್ರೈವ ಹಿ ಪಶ್ಯಾಮಿ ಮೂರ್ತಿಮತ್ಪುರತಃ ಸ್ಥಿತಂ ॥ ೬೪ ॥

ಜಗದೇತನ್ಮಹಾಶ್ಚರ್ಯರೂಪಂ ಯಸ್ಯ ಮಹಾತ್ಮನಃ ।
ತೇನಾಶ್ಚರ್ಯಪರೇಣಾಹಂ ಭವತಾ ಕೃಷ್ಣ ಸಂಗತಃ ॥ ೬೫ ॥

---

೬೨. ಬಳಿಕ ಯಥಾಪ್ರಕಾರ (ಮೊದಲು ಇದ್ದ ಹಾಗೆಯೇ) ಬಲರಾಮನೂ ಕೃಷ್ಣನೂ ರಥದ ಬಳಿಯಿರುವುದನ್ನು ಕಂಡು ಆಶ್ಚರ್ಯದಿಂದ ವಿಕಸಿತವಾದ ನಯನಗಳುಳ್ಳ ಆ ಅಕ್ರೂರನನ್ನು ನೋಡಿ ಶ್ರೀಕೃಷ್ಣನು ಇಂತೆಂದನು.

೬೩. "ಅಯ್ಯಾ, ಅಕ್ರೂರ! ನಿನ್ನ ಕಣ್ಣುಗಳು ಆಶ್ಚರ್ಯದಿಂದ ಅರಳಿರುವುದನ್ನು ಕಂಡರೆ, ನೀನು ಯಮುನಾನದಿಯ ಜಲದಲ್ಲಿ ಏನೋ ಅದ್ಭುತವಾದ ದೃಶ್ಯವೊಂದನ್ನು ನೋಡಿರುವಂತಿದೆ! ನೀನು ನೋಡಿದುದಾದರೂ ಏನು?" ಎಂದು ಕೇಳಲು,

೬೪-೬೫. ಆಗ ಅಕ್ರೂರನು ಶ್ರೀಕೃಷ್ಣನನ್ನು ಕುರಿತು, ಅಯ್ಯಾ ಅಚ್ಯುತನೇ, ಯಮುನಾನದಿಯ ನೀರಿನ ನಡುವೆ ನಾನು ಯಾವ ಆಶ್ಚರ್ಯಕರವಾದ ದೃಶ್ಯವನ್ನು ಕಂಡೆನೋ, ಅದನ್ನು ಇಲ್ಲಿಯೇ ನನ್ನ ಎದುರಿಗೇ ಸಾಕಾರವಾಗಿ ಕಾಣುತ್ತಿರುವೆನು. ನಮ್ಮ ಕಣ್ಣಿಗೆ ಕಾಣುವ ಈ ಜಗತ್ತೆಲ್ಲವೂ ಯಾವ ಮಹಾತ್ಮನ ಅದ್ಭುತ ಕಾರ್ಯವೆನಿಸಿರುವುದೋ, ಅಂತಹ ಆಶ್ಚರ್ಯಕರವಾದ ಲೀಲೆಗಳನ್ನು ತೋರುವ ನಿನ್ನೊಡನೆ ನಾನು ಸೇರಿರುವೆನು.

ತತ್ಕಿಮೇತೇನ ಮಥುರಾಂ ಪ್ರಯಾಮೋ ಮಧುಸೂದನ ।
ಬಿಭೇಮಿ ಕಂಸಾದ್ಧಿಗ್ಜನ್ಮ ಪರಪಿಂಡೋಪಜೀವಿನಃ ॥ ೬೬ ॥

॥ ವ್ಯಾಸ ಉವಾಚ ॥

ಇತ್ಯುಕ್ತ್ವಾ ಚೋದಯಾಮಾಸ ತಾನ್ಹಯಾನ್ವಾತರಂಹಸಃ ।
ಸಂಪ್ರಾಪ್ತಶ್ಚಾಪಿ ಸಾಯಾಹ್ನೇ ಸೋಽಕ್ರೂರೋ ಮಥುರಾಂ ಪುರೀಂ ।
ವಿಲೋಕ್ಯ ಮಥುರಾಂ ಕೃಷ್ಣಂ ರಾಮಂ ಚಾಹ ಸ ಯಾದವಃ ॥ ೬೭ ॥

॥ ಅಕ್ರೂರ ಉವಾಚ ॥

ಪದ್ಭ್ಯಾಂ ಯಾತಂ ಮಹಾವೀರ್ಯೌ ರಥೇನೈಕೋ ವಿಶಾಮ್ಯಹಂ ।
ಗಂತವ್ಯಂ ವಸುದೇವಸ್ಯ ನೋ ಭವದ್ಭ್ಯಾಂ ತಥಾ ಗೃಹೇ ।
ಯುವಯೋರ್ಹಿ ಕೃತೇ ವೃದ್ಧಃ ಕಂಸೇನ ಸ ನಿರಸ್ಯತೇ ॥ ೬೮ ॥

॥ ವ್ಯಾಸ ಉವಾಚ ॥

ಇತ್ಯುಕ್ತ್ವಾ ಪ್ರವಿವೇಶಾಸಾವಕ್ರೂರೋ ಮಥುರಾಂ ಪುರೀಂ ।
ಪ್ರವಿಷ್ಟೌ ರಾಮಕೃಷ್ಣೌ ಚ ರಾಜಮಾರ್ಗಮುಪಾಗತೌ ॥ ೬೯ ॥

---

೬೬. ಆದುದರಿಂದ ಎಲೈ ಮಧುಸೂದನನೇ, ಇವೆಲ್ಲ ಸುದ್ದಿಯೇಕೆ ಮಥುರೆಗೆ ಹೋಗೋಣ. ಆ ಕಂಸನಿಗೆ ಹೆದರುತ್ತೇನೆ. ಮತ್ತೊಬ್ಬರು ನೀಡಿದ ಕೂಳಿಗೆ ಕಾದುಕೊಂಡು ಬಾಳುವ ಮನುಷ್ಯನ ಜನ್ಮಕ್ಕೆ ಧಿಕ್ಕಾರವಿರಲಿ.

೬೭–೬೮. ಹೀಗೆಂದು ನುಡಿದು ಆಅಕ್ರೂರನು ವೇಗದಲ್ಲಿ ವಾಯು ವಿಗೆಣೆಯಾದ ಆ ಕುದುರೆಗಳನ್ನು ನಡೆಸುತ್ತಾ ಸಂಜೆಯ ಹೊತ್ತಿಗೆ ಮಥುರಾ ನಗರಕ್ಕೆ ಬಂದು ಸೇರಿದನು. ಆಗ ಆ ಯಾದವನು, ಮಥುರೆಯನ್ನೂ ಬಲರಾಮಕೃಷ್ಣರನ್ನೂ ನೋಡುತ್ತಾ, “ ಎಲೈ ಮಹಾವೀರ್ಯಶಾಲಿಗಳೇ, ನೀವೀ ರ್ವರೂ ಇಲ್ಲಿಂದ ಮುಂದಕ್ಕೆ ಕಾಲ್ನಡಿಗೆಯಿಂದಲೇ ಹೋಗಿರಿ. ನಾನೊಬ್ಬನೇ ರಥದಲ್ಲಿ ಹೋಗುವೆನು. ಆದರೆ ನೀವು ವಸುದೇವನಮನೆಗೆ ಮಾತ್ರ ಹೋಗ ಬೇಡಿರಿ. ಏಕೆಂದರೆ ನಿಮ್ಮಸಲುವಾಗಿ ಆ ವೃದ್ಧನು ಕಂಸನ ಉಪಟಳಕ್ಕೆ ಈಡಾಗಬೇಕಾಗುವುದು ” ಎಂದನು.

೬೯–೭೦. ಹೀಗೆ ಹೇಳಿ ಆ ಅಕ್ರೂರನು ಮಥುರಾನಗರವನ್ನು ಪ್ರವೇಶಿಸಿದನು. ಬಳಿಕ ಆ ರಾಮಕೃಷ್ಣರಿಬ್ಬರೂ, ಮದ್ದಾನೆಯ ಮಗಳಂತೆ ಮಥುರಾ ನಗರದ ರಾಜಬೀದಿಯಲ್ಲಿ ಲೀಲೆಯಿಂದ ಸಂಚರಿಸುತ್ತಾ, ಸ್ತ್ರೀಯರಿಂದಲೂ,

ಸ್ತ್ರೀಭಿರ್ನರೈಶ್ಚ ಸಾನಂದಲೋಚನೈರಭಿವೀಕ್ಷಿತೌ ।
ಜಗ್ಮತುರ್ಲೀಲಯಾ ವೀರೌ ಪ್ರಾಪ್ತೌ ಬಾಲಗಜಾವಿವ ॥ ೨೦ ॥

ಭ್ರಮಮಾಣೌ ತು ತೌ ದೃಷ್ಟ್ವಾ ರಜಕಂ ರಂಗಕಾರಕಂ ।
ಅಯಾಚೇತಾಂ ಸ್ವರೂಪಾಣಿ ವಾಸಾಂಸಿ ರುಚಿರಾಣಿ ತೌ ॥ ೨೧ ॥

ಕಂಸಸ್ಯ ರಜಕಃ ಸೋಽಥ ಪ್ರಸಾದಾರೂಢವಿಸ್ಮಯಃ ।
ಬಹೂನ್ಯಾಕ್ಷೇಪವಾಕ್ಯಾನಿ ಪ್ರಾಹೌಚ್ಚೈ ರಾಮಕೇಶವೌ ॥ ೨೨ ॥

ತತಸ್ತಲಪ್ರಹಾರೇಣ ಕೃಷ್ಣಸ್ತಸ್ಯ ದುರಾತ್ಮನಃ ।
ಪಾತಯಾಮಾಸ ಕೋಪೇನ ರಜಕಸ್ಯ ಶಿರೋ ಭುವಿ ॥ ೨೩ ॥

ಹತ್ವಾದಾಯ ಚ ವಸ್ತ್ರಾಣಿ ಪೀತನೀಲಾಂಬರೌ ತತಃ ।
ಕೃಷ್ಣರಾಮೌ ಮುದಾಯುಕ್ತೌ ಮಾಲಾಕಾರಗೃಹಂ ಗತೌ ॥ ೨೪ ॥

---

ಪುರುಷರಿಂದಲೂ ಆನಂದದಿಂದ ತುಂಬಿದಕಣ್ಣುಗಳಿಂದ ನೋಡಲ್ಪಡುತ್ತಾ ಬರುತ್ತಿದ್ದರು.

೨೧. ಅವರು ಹೀಗೆ ತಿರುಗಾಡುತ್ತಾ ಬರುತ್ತಿರುವಾಗ ಬಟ್ಟೆಗಳನ್ನು ಮಡಿ ಮಾಡಿಕೊಡುವ ಅಗಸನೊಬ್ಬನನ್ನು ಕಂಡರು. ಆಗ ಅವರು ತಮಗೆ ಒಪ್ಪುವ ಮನೋಹರವಾದ ಬಟ್ಟೆಗಳನ್ನು ಕೊಡುವಂತೆ ಅವನನ್ನು ಕೇಳಿದರು.

೨೨-೨೩. ಆ ಅಗಸನು ಕಂಸನ ಬಟ್ಟೆಗಳನ್ನು ಮಡಿ ಮಾಡುವವನು. ಅವನು ಕಂಸನ ಕೃಪೆಗೆ ಪಾತ್ರನಾದುದರಿಂದ ಗರ್ವದಿಂದ ಮೆರೆಯುತ್ತಿದ್ದನು. ಆದುದರಿಂದ ಅವನು, ಬಲರಾಮಕೃಷ್ಣರು ತನ್ನನ್ನು ಹೀಗೆ ಕೇಳುತ್ತಲೇ ಅವರನ್ನು ಬಹುವಾಗಿ ತುಚ್ಛೀಕರಿಸಿ ಬೈಯತೊಡಗಿದನು. ಆಗ ಕೃಷ್ಣನಿಗೆ ಬಹು ಕೋಪವುಂಟಾಗಿ, ಆ ದುಷ್ಟವಾದ ಅಗಸನ ತಲೆಯನ್ನು ಒಂದೇ ಒಂದು ಮುಷ್ಟಿ ಪ್ರಹಾರದಿಂದ ನೆಲಕ್ಕೆ ಕೆಡವಿದನು.

೨೪. ಅವನನ್ನು ಸಂಹರಿಸಿ ಅವನ ಬಳಿಯಲ್ಲಿದ್ದ ಬಟ್ಟೆಗಳನ್ನು ತೆಗೆದುಕೊಂಡು, ಕೃಷ್ಣನು ಪೀತಾಂಬರವನ್ನೂ, ಬಲರಾಮನು ನೀಲಾಂಬರವನ್ನೂ ಉಟ್ಟು ಸಂತೋಷದಿಂದ ಬರುತ್ತಾ ದಾರಿಯಲ್ಲಿ ಹೂವಾಡಿಗನೊಬ್ಬನ ಮನೆಯನ್ನು ಪ್ರವೇಶಿಸಿದರು.

ವಿಕಾಸಿನೇತ್ರಯುಗಲೋ ಮಾಲಾಕಾರೋಽತಿವಿಸ್ಮಿತಃ ।
ಏತೌ ಕಸ್ಯ ಕುತೋ ಯಾತೌ ಮನಸಾಚಿಂತಯತ್ತತಃ ॥ ೭೫ ॥

ಪೀತನೀಲಾಂಬರಧರೌ ದೃಷ್ಟ್ವಾತಿಸುಮನೋಹರೌ ।
ಸ ತರ್ಕಯಾಮಾಸ ತದಾ ಭುವಂ ದೇವಾವುಪಾಗತೌ ॥ ೭೬ ॥

ವಿಕಾಶಿಮುಖಪದ್ಮಾಭ್ಯಾಂ ತಾಭ್ಯಾಂ ಪುಷ್ಪಾಣಿ ಯಾಚಿತಃ ।
ಭುವಂ ವಿಷ್ಟಭ್ಯ ಹಸ್ತಾಭ್ಯಾಂ ಪಸ್ಪರ್ಶ ಶಿರಸಾ ಮಹೀಂ ॥ ೭೭ ॥

ಪ್ರಸಾದಸುಮುಖೌ ನಾಥೌ ಮಮ ಗೇಹಮುಪಾಗತೌ ।
ಧನ್ಯೋಽಹಮರ್ಚಯಿಷ್ಯಾಮೀತ್ಯಾಹ ತೌ ಮಾಲ್ಯಜೀವಿಕಃ ॥ ೭೮ ॥

ತತಃ ಪ್ರಹೃಷ್ಟವದನಸ್ತಯೋಃ ಪುಷ್ಪಾಣಿ ಕಾಮತಃ ।
ಚಾರೂಣ್ಯೇತಾನಿ ಚೈತಾನಿ ಪ್ರದದೌ ಸ ವಿಲೋಭಯನ್ ॥ ೭೯ ॥

೭೫–೭೬. ಆಗ ಆ ಮನೆಯವನಾದ ಹೂವಾಡಿಗನು ರಾಮಕೃಷ್ಣರು ಬಂದುದನ್ನು ಕಂಡು ಪರಮಾಶ್ಚರ್ಯದಿಂದ ತನ್ನೆರಡು ಕಂಗಳನ್ನೂ ಅರಳಿಸಿ ನೋಡುತ್ತಾ, "ಇವರು ಯಾರು? ಯಾರ ಮಕ್ಕಳು? ಎಲ್ಲಿಂದ ಬಂದರು? ಎಂದು ಮುಂತಾಗಿ ತನ್ನ ಮನಸ್ಸಿನಲ್ಲಿ ಆಲೋಚಿಸಿದನು. ಆಗ ಅವನು ಪೀತಾಂಬರವನ್ನೂ ನೀಲಾಂಬರವನ್ನೂ ಉಟ್ಟು, ಮನೋಹರವಾದ ರೂಪದಿಂದ ಮೆರೆಯುತ್ತಿರುವ ಆ ಕೃಷ್ಣಬಲರಾಮರನ್ನು ನೋಡಿ, ಯಾರೋ ದೇವತೆಗಳು ಭೂಮಿಗೆ ಬಂದಿರುವರೆಂಬುದಾಗಿ ಭಾವಿಸಿದನು.

೭೭. ಆಗ ಆ ಬಲರಾಮಕೃಷ್ಣರಿಬ್ಬರೂ ಅರಳಿದ ಕಮಲದಂತೆ ನಗು ನಗುತ್ತಿರುವ ಮುಖದಿಂದ ಆ ಹೂವಾಡಿಗನನ್ನು ತಮಗೆ ಹೂವನ್ನು ಕೊಡುವಂತೆ ಕೇಳಿದರು. ಆಗ ಅವನು ನೆಲದಮೇಲೆ ಕೈಗಳನ್ನೂರಿ ಅವರಿಬ್ಬರಿಗೆ ತಲೆಮುಟ್ಟಿ ನಮಸ್ಕರಿಸಿದನು.

೭೮-೭೯. ಬಳಿಕ ಆ ಹೂವಾಡಿಗನು, ಅವರನ್ನು ಕುರಿತು "ಎಲೈ ಪ್ರಭುಗಳಿರಾ, ನಾನಿಂದು ಧನ್ಯನಾದೆನು. ನೀವು ನನ್ನಮೇಲೆ ಅನುಗ್ರಹವಿಟ್ಟು ಮನೆಗೆ ಬಿಜಯಮಾಡಿಸಿರುವಿರಿ, ಆದುದರಿಂದ ನಿಮ್ಮನ್ನು ಪೂಜಿಸುವೆನು"

ಪುನಃ ಪುನಃ ಪ್ರಣಮ್ಯಾಸೌ ಮಾಲಾಕಾರೋತ್ತಮೋ ದದೌ ।
ಪುಷ್ಪಾಣಿ ತಾಭ್ಯಾಂ ಚಾರೂಣಿ ಗಂಧವಂತ್ಯಮಲಾನಿ ಚ ॥ ೮೦ ॥

ಮಾಲಾಕಾರಾಯ ಕೃಷ್ಣೋಽಪಿ ಪ್ರಸನ್ನಃ ಪ್ರದದೌ ವರಂ ।
ಶ್ರೀಸ್ತ್ವಾಂ ಮತ್ಸಂಶ್ರಯಾ ಭದ್ರ ನ ಕದಾಚಿತ್ತ್ಯಜಿಷ್ಯತಿ ॥ ೮೧ ॥

ಬಲಹಾನಿರ್ನ ತೇ ಸೌಮ್ಯ ಧನಹಾನಿರಥಾಪಿ ವಾ ।
ಯಾವದ್ಧರಣಿಸೂರ್ಯೌ ಚ ಸಂತತಿಃ ಪುತ್ರಪೌತ್ರಿಕೀ ॥ ೮೨ ॥

ಭುಕ್ತ್ವಾ ಚ ವಿಪುಲಾನ್ಭೋಗಾಂಸ್ತ್ವಮಂತೇ ಮತ್ಪ್ರಸಾದತಃ ।
ಮಮಾನುಸ್ಮರಣಂ ಪ್ರಾಪ್ಯ ದಿವ್ಯಲೋಕಮವಾಪ್ಸ್ಯಸಿ ॥ ೮೩ ॥

ಧರ್ಮೇ ಮನಶ್ಚ ತೇ ಭದ್ರ ಸರ್ವಕಾಲಂ ಭವಿಷ್ಯತಿ ।
ಯುಷ್ಮತ್ಸಂತತಿಜಾತಾನಾಂ ದೀರ್ಘಮಾಯುರ್ಭವಿಷ್ಯತಿ ॥ ೮೪ ॥

---

ಎಂದು ಹೇಳಿ ಸಂತೋಷದಿಂದ ಹಿಗ್ಗಿದ ಮೊಗವುಳ್ಳವನಾಗಿ 'ನೀವಿಷ್ಟಪಟ್ಟ ಹೂಗಳನ್ನು ತೆಗೆದುಕೊಳ್ಳಿರಿ, ಈ ಹೂಗಳು ಚೆನ್ನಾಗಿವೆ' ಎಂದು ಅವರ ಮನಸ್ಸನ್ನು ಒಲಿಸುತ್ತಾ ಹೂಗಳನ್ನು ಒಪ್ಪಿಸಿದನು.

೮೦. ಹೀಗೆ ಆ ಶ್ರೇಷ್ಠನಾದ ಹೂವಾಡಿಗನು ಪುನಃ ಪುನಃ ಆ ರಾಮಕೃಷ್ಣರಿಗೆ ನಮಸ್ಕರಿಸಿ ಸೊಗಸಾಗಿಯೂ, ಶುದ್ಧವಾಗಿಯೂ, ಒಳ್ಳೆಯ ವಾಸನೆಯನ್ನು ಬೀರುತ್ತಲೂ ಇರುವ ಹೂವುಗಳನ್ನು ಕೊಟ್ಟನು.

೮೧-೮೨. ಆಗ ಶ್ರೀಕೃಷ್ಣನಿಗೆ ಆ ಹೂವಾಡಿಗನಮೇಲೆ ಅನುಗ್ರಹಬುದ್ಧಿಯುಂಟಾಗಿ ಎಲೈ ಸೌಮ್ಯನೇ! ನಿನ್ನಲ್ಲಿ ನೆಲೆಸಿರುವ ಲಕ್ಷ್ಮಿಯು ಎಂದೆಂದಿಗೂ ನಿನ್ನನ್ನು ತ್ಯಜಿಸುವುದಿಲ್ಲ. ನಿನಗೆ ಬಲಹಾನಿಯಾಗಲೀ, ಧನಹಾನಿಯಾಗಲೀ ಎಂದಿಗೂ ಆಗುವುದಿಲ್ಲ. ಈ ಭೂಮಿಯೂ ಸೂರ್ಯನೂ ಇರುವವರೆಗೂ ನಿನ್ನ ಸಂತತಿಯು ಪುತ್ರಪೌತ್ರಾದಿಗಳಿಂದ ಕೂಡಿ ನಡೆದುಕೊಂಡು ಬರುತ್ತಿರುವುದು.

೮೩-೮೫. ನೀನು ಈ ಲೋಕದಲ್ಲಿ ನನ್ನ ಅನುಗ್ರಹದಿಂದ ಅನೇಕವಾದ ಭೋಗಗಳನ್ನನುಭವಿಸಿ ಕೊನೆಗೆ ಜೀವಿತಾಂತ್ಯದಲ್ಲಿ ನನ್ನನ್ನೇ ಧ್ಯಾನಮಾಡುತ್ತಾ

ನೋಽಪಸರ್ಗಾದಿಕಂ ದೋಷಂ ಯುಷ್ಮತ್ಸಂತತಿಸಂಭವಃ ।
ಅವಾಪ್ಸ್ಯತಿ ಮಹಾಭಾಗ ಯಾವತ್ಸೂರ್ಯೋ ಭವಿಷ್ಯತಿ ॥ ೮೫ ॥

॥ ವ್ಯಾಸ ಉವಾಚ ॥

ಇತ್ಯುಕ್ತ್ವಾ ತದ್ಗೃಹಾತ್ಕೃಷ್ಣೋ ಬಲದೇವಸಹಾಯವಾನ್ ।
ನಿರ್ಜಗಾಮ ಮುನಿಶ್ರೇಷ್ಠಾ ಮಾಲಾಕಾರೇಣ ಪೂಜಿತಃ ॥ ೮೬ ॥

ಇತಿ ಶ್ರೀಮಹಾಪುರಾಣೇ ಆದಿಬ್ರಾಹ್ಮೇಽಕ್ರೂರಪ್ರತ್ಯಾಗಮನಂ
ನಾಮ ದ್ವಿನವತ್ಯಧಿಕಶತತಮೋಽಧ್ಯಾಯಃ

---

ದಿವ್ಯವಾದ ಲೋಕಗಳನ್ನು ಪಡೆಯುವೆ. ಎಲೈ ಮಂಗಳಕರನೇ, ನಿನ್ನ ಮನಸ್ಸು ಸರ್ವಕಾಲದಲ್ಲಿಯೂ ಧರ್ಮದಲ್ಲಿಯೇ ಆಸಕ್ತವಾಗಿರುವುದು. ನಿನ್ನ ವಂಶದಲ್ಲಿ ಹುಟ್ಟುವವರೆಲ್ಲರೂ ದೀರ್ಘಾಯುಗಳಾಗಿರುವರು. ಸೂರ್ಯನು ಇರುವವರೆಗೂ, ನಿನ್ನ ವಂಶದಲ್ಲಿ ಹುಟ್ಟಿದವನು ಯಾವನೇ ಆಗಲಿ ಅವನಿಗೆ ಯಾವೊಂದು ಉಪದ್ರವವೂ ಉಂಟಾಗಲಾರದು ಎಂದನು.

೮೬. ಎಲೈ ಮುನಿಶ್ರೇಷ್ಠರೇ, ಹೀಗೆ ಆ ಹೂವಾಡಿಗನನ್ನು ಅನುಗ್ರಹಿಸಿ, ಅವನಿಂದ ಪೂಜೆಯನ್ನು ಕೈಗೊಂಡು ಬಲದೇವನೊಡನೆ ಅವನ ಮನೆಯಿಂದ ಹೊರಟು ಬಂದನು.

ಇಲ್ಲಿಗೆ ಶ್ರೀಬ್ರಹ್ಮಪುರಾಣದಲ್ಲಿ ಅಕ್ರೂರಪ್ರತ್ಯಾಗಮನವೆಂಬ
ನೂರತೊಂಭತ್ತೆರಡನೆಯ ಅಧ್ಯಾಯವು ಮುಗಿದುದು.

---

ಶ್ರೀಃ

ಓಂ ತತ್ಸದ್ಬ್ರಹ್ಮಣೇನಮಃ

# ಅಥ ಮಹಾ ಪುರಾಣೇ ಬ್ರಾಹ್ಮೇ

## ತ್ರಿನವತ್ಯಧಿಕಶತತಮೋಽಧ್ಯಾಯಃ

॥ ವ್ಯಾಸ ಉವಾಚ ॥

ರಾಜಮಾರ್ಗೇ ತತಃ ಕೃಷ್ಣಃ ಸಾನುಲೇಪನಭಾಜನಾಂ ।
ದದರ್ಶ ಕುಬ್ಜಾಮಾಯಾಂತೀಂ ನವಯೌವನಗೋಚರಾಂ ॥ ೧ ॥

ತಾಮಾಹ ಲಲಿತಂ ಕೃಷ್ಣಃ ಕಸ್ಯೇದಮನುಲೇಪನಂ ।
ಭವತ್ಯಾ ನೀಯತೇ ಸತ್ಯಂ ವದೇಂದೀವರಲೋಚನೇ ॥ ೨ ॥

ಸಕಾಮೇನೈವ ಸಾ ಪ್ರೋಕ್ತಾ ಸಾನುರಾಗಾ ಹರಿಂ ಪ್ರತಿ ।
ಪ್ರಾಹ ಸಾ ಲಲಿತಂ ಕುಬ್ಜಾ ದದರ್ಶ ಚ ಬಲಾತ್ತತಃ ॥ ೩ ॥

### ನೂರತೊಂಭತ್ತಮೂರನೆಯ ಅಧ್ಯಾಯವು

೧. ವ್ಯಾಸನು ಹೇಳತೊಡಗಿದನು :—ಬಳಿಕ ಆ ಕೃಷ್ಣನು ರಾಜಮಾರ್ಗದಲ್ಲಿ ಬರುತ್ತಾ, ಕೈಯ್ಯಲ್ಲಿ ಗಂಧದ ಬಟ್ಟಲನ್ನು ಹಿಡಿದುಕೊಂಡು ಎದುರಿಗೆ ಬರುತ್ತಿರುವ ನವಯೌವನಶಾಲಿನಿಯಾದ ಕುಬ್ಜೆಯೊಬ್ಬಳನ್ನು ಕಂಡನು.

೨. ಆಗ ಕೃಷ್ಣನು ಅವಳನ್ನು ಕುರಿತು “ಎಲೈ, ಕಮಲನಯನೆಯೇ, ನೀನು ಯಾರಿಗೆ ಈ ಅನುಲೇಪನ (ಗಂಧ) ವನ್ನು ತೆಗೆದುಕೊಂಡು ಹೋಗುತ್ತಿರುವೆ ? ನಿಜವಾಗಿ ಹೇಳು ” ಎಂದು ಮಧುರವಾಗಿ ಪ್ರಶ್ನಿಸಿದನು.

೩. ಹೀಗೆ ಶ್ರೀಕೃಷ್ಣನು ಕುತೂಹಲದಿಂದ ಕೇಳಲಾಗಿ ಆ ಕುಬ್ಜೆಯು, ಅವನಲ್ಲಿ ಅನುರಾಗವನ್ನು ತಾಳಿದಳು. ಅವಳ ನೋಟವು ಬಲರಾಮನಿ

॥ ಕುಬ್ಜ್ಯೋವಾಚ ॥
ಕಾಂತ ಕಸ್ಮಾನ್ನ ಜಾನಾಸಿ ಕಂಸೇನಾಪಿ ನಿಯೋಜಿತಾ ।
ನೈಕವಕ್ರೇತಿ ವಿಖ್ಯಾತಾಮನುಲೇಪನಕರ್ಮಣಿ ॥ ೪ ॥

ನಾನ್ಯಪಿಷ್ಟಂ ಹಿ ಕಂಸಸ್ಯ ಪ್ರೀತಯೇ ಹ್ಯನುಲೇಪನಂ ।
ಭವತ್ಯಹಮತೀವಾಸ್ಯ ಪ್ರಸಾದಧನಭಾಜನಂ ॥ ೫ ॥

॥ ಶ್ರೀಕೃಷ್ಣ ಉವಾಚ ॥
ಸುಗಂಧಮೇತದ್ರಾಜಾರ್ಹಂ ರುಚಿರಂ ರುಚಿರಾನನೇ ।
ಆವಯೋರ್ಗಾತ್ರಸದೃಶಂ ದೀಯತಾಮನುಲೇಪನಂ ॥ ೬ ॥

॥ ವ್ಯಾಸ ಉವಾಚ ॥
ಶ್ರುತ್ವಾ ತಮಾಹ ಸಾ ಕೃಷ್ಣಂ ಗೃಹ್ಯತಾಮಿತಿ ಸಾದರಂ ।
ಅನುಲೇಪಂ ಚ ಪ್ರದದೌ ಗಾತ್ರಯೋಗ್ಯಮುಭೋಭಯೋಃ ॥ ೭ ॥

---

ಗಿಂತಲೂ ವಿಶೇಷವಾಗಿ ಅವನಕಡೆಯೇ ಹೊರಳುತ್ತಿತ್ತು. ಆಗ ಅವಳು ಮಧುರವಾಗಿ ಇಂತೆಂದು ನುಡಿದಳು.

೪-೫. ಎಲೈ ಕಾಂತನೇ, ನನ್ನನ್ನು ನೀನರಿಯದಿರುವುದೇಕೆ? ನನ್ನ ಮೈಯ್ಯೆಲ್ಲವೂ ಸೊಟ್ಟುಸೊಟ್ಟಾಗಿರುವುದರಿಂದ ನನಗೆ 'ನೈಕ ವಕ್ರೆ' ಯೆಂದೇ (ಅನೇಕ ಸೊಟ್ಟುಗಳುಳ್ಳವಳು) ಪ್ರಸಿದ್ಧಿಯಾಗಿರುವುದು. ಕಂಸನು ನನ್ನನ್ನು ಗಂಧವನ್ನು ಸಿದ್ಧಗೊಳಿಸಲು ನೇಮಿಸಿರುವನು. ಮತ್ತೊಬ್ಬರು ಅರೆದು ತಂದ ಗಂಧವು ಕಂಸನಿಗೆ ಹಿತವಾಗುವುದಿಲ್ಲ. ಅವನಿಗೆ ನನ್ನಮೇಲೆ ಬಹುವಾಗಿ ಅನುಗ್ರಹವುಂಟಾಗಿ ಬೇಕಾದ ಸಂಪತ್ತನ್ನು ನನಗೆ ಕೊಟ್ಟಿರುವನು ಎಂದಳು.

೬. ಆಗ ಶ್ರೀಕೃಷ್ಣನು ಕುಬ್ಜೆಯನ್ನು ಕುರಿತು "ಎಲೆ ಮನೋಹರ ವದನೆ! ಸುವಾಸನೆಯನ್ನು ಬೀರುತ್ತಿರುವ ಈ ಸುಂದರವೂ ರಾಜಯೋಗ್ಯವೂ ಆದ ಗಂಧವನ್ನು, ನಾವಿಬ್ಬರು ಮೈಗೆ ತೊಡೆದುಕೊಳ್ಳಲು ಸಾಕಾಗುವಷ್ಟು ಕೊಡುವೆಯಾ!" ಎಂದನು.

೭. ಆ ಮಾತನ್ನು ಕೇಳುತ್ತಲೇ ಆ ಕುಬ್ಜೆಯು, ಆದರದಿಂದ, ತೆಗೆದು ಕೊಳ್ಳಬಹುದೆಂದು ಹೇಳಿ ಅವರ ಮೈಗೆ ತೊಡೆದುಕೊಳ್ಳಲು ಉಚಿತವಾದ ಆ ಅನುಲೇಪನವನ್ನು ಶ್ರೀಕೃಷ್ಣನಿಗೆ ಕೊಟ್ಟಳು.

ಭಕ್ತಿಚ್ಛೇದಾನುಲಿಪ್ತಾಂಗೌ ತತಸ್ತೌ ಪುರುಷರ್ಷಭೌ ।
ಸೇಂದ್ರಚಾಪೌ ವಿರಾಜಂತೌ ಸಿತಕೃಷ್ಣಾವಿವಾಂಬುದೌ ॥ ೮ ॥

ತತಸ್ತಾಂ ಚಿಬುಕೇ ಶೌರಿರುಲ್ಲಾಪನವಿಧಾನವಿತ್ ।
ಉಲ್ಲಾಪ್ಯ ತೋಲಯಾಮಾಸ ದ್ವ್ಯಂಗುಲೇನಾಗ್ರಪಾಣಿನಾ ॥ ೯ ॥

ಚಕರ್ಷ ಪದ್ಭ್ಯಾಂ ಚ ತದಾ ಋಜುತ್ವಂ ಕೇಶವೋಽನಯತ್ ।
ತತಃ ಸಾ ಋಜುತಾಂ ಪ್ರಾಪ್ತಾ ಯೋಷಿತಾಮಭವದ್ವರಾ ॥ ೧೦ ॥

ವಿಲಾಸಲಲಿತಂ ಪ್ರಾಹ ಪ್ರೇಮಗರ್ಭಭರಾಲಸಂ ।
ವಸ್ತ್ರೇ ಪ್ರಗೃಹ್ಯ ಗೋವಿಂದಂ ವ್ರಜ ಗೇಹಂ ಮಮೇತಿ ವೈ ॥ ೧೧ ॥

ಆಯಾಸ್ಯೇ ಭವತೀಗೇಹಮಿತಿ ತಾಂ ಪ್ರಾಹ ಕೇಶವಃ ।
ವಿಸಸರ್ಜ ಜಹಾಸೋಚ್ಚೈ ರಾಮಸ್ಯಾಲೋಕ್ಯ ಚಾನನಂ ॥ ೧೨ ॥

---

೮. ಬಳಿಕ ಆ ಪುರುಷಶ್ರೇಷ್ಠರೀರ್ವರೂ ಆ ಗಂಧವನ್ನು ಅಂದವಾಗಿ ಮೈಗೆ ತೊಡೆದುಕೊಂಡರು. ಆಗ ಅವರು, ಕಾಮನಬಿಲ್ಲಿನಿಂದ ಅಲಂಕೃತವಾದ ಬಿಳಿಯ ಮತ್ತು ಕರಿಯ ಮೋಡಗಳಂತೆ ಶೋಭಿಸಿದರು.

೯-೧೦. ಅನಂತರ ವಕ್ರತೆಯನ್ನು ಸರಿಪಡಿಸುವುದರಲ್ಲಿ ನಿಪುಣನಾದ ಆ ಶ್ರೀಕೃಷ್ಣನು, ತನ್ನ ಕೈಯ ತುದಿಬೆರಳುಗಳೆರಡರಿಂದ ಆ ಕುಬ್ಜೆಯನ್ನು ಚಿಬುಕ ಪ್ರದೇಶದಲ್ಲಿ (ಗಡ್ಡ) ಹಿಡಿದುಕೊಂಡು, ಅವಳ ಕಾಲುಗಳನ್ನು ತನ್ನ ಪಾದಗಳಿಂದ ಮೆಟ್ಟಿ ಹಿಡಿದು, ಮೇಲಕ್ಕೆಳೆದು ಸರಿಯಾಗಿ ನಿಲ್ಲಿಸಿದನು. ಆಗ ಆ ಕುಬ್ಜೆಯು ತನ್ನ ವಕ್ರತೆಯೆಲ್ಲವನ್ನೂ ತೊರೆದು ನೆಟ್ಟಗಾದಳಲ್ಲದೆ, ಹೆಂಗಸರಲ್ಲೆಲ್ಲಾ ಉತ್ತಮಾಂಗನೆ (ಸೌಂದರ್ಯವತಿ) ಯೆನಿಸಿದಳು.

೧೧. ಬಳಿಕ ಆ ಕುಬ್ಜೆಯು ವಿಲಾಸದಿಂದ ಬಳುಕುತ್ತಾ, ಅನುರಾಗದಿಂದ ತುಂಬಿದ ಹೃದಯವುಳ್ಳವಳಾಗಿ ಆ ಶ್ರೀಕೃಷ್ಣನ ಸೆರಗನ್ನು ಹಿಡಿದು ಮೆಲ್ಲ ಮೆಲ್ಲನೆ ನಮ್ಮ ಮನೆಗೆ ಬಾರೆಂದು ನುಡಿದಳು.

೧೨. ಆಗ ಆ ಶ್ರೀಕೃಷ್ಣನು ಬಲರಾಮನ ಮುಖವನ್ನು ನೋಡಿ, ಆ ಕುಬ್ಜೆಯನ್ನು ಕುರಿತು ನಿನ್ನ ಮನೆಗೆ ಬರುತ್ತೇನೆಂದು ಹೇಳಿ ಅವಳನ್ನು ಬೀಳ್ಕೊಟ್ಟು ಗಟ್ಟಿಯಾಗಿ ನಕ್ಕನು.

ಭಕ್ತಿಚ್ಛೇದಾನುಲಿಪ್ತಾಂಗೌ ನೀಲಪೀತಾಂಬರಾವೃಭೌ ।
ಧನುಃಶಾಲಾಂ ತತೋ ಯಾತೌ ಚಿತ್ರಮಾಲ್ಯೋಪಶೋಭಿತೌ ॥ ೧೩ ॥

ಅಥಾಖ್ಯಸ್ಯ ಚ ಧನೂರತ್ನಂ ತಾಭ್ಯಾಂ ಪೃಷ್ಟೈಸ್ತು ರಕ್ಷಿಭಿಃ ।
ಆಖ್ಯಾತಂ ಸಹಸಾ ಕೃಷ್ಣೋ ಗೃಹೀತ್ವಾಪೂರಯದ್ಧನುಃ ॥ ೧೪ ॥

ತತಃ ಪೂರಯತಾ ತೇನ ಭಜ್ಯಮಾನಂ ಬಲಾದ್ಧನುಃ ।
ಚಕಾರಾತಿಮಹಾಶಬ್ದಂ ಮಥುರಾ ತೇನ ಪೂರಿತಾ ॥ ೧೫ ॥

ಅನುಯುಕ್ತೌ ತತಸ್ತೌ ಚ ಭಗ್ನೇ ಧನುಷಿ ರಕ್ಷಿಭಿಃ ।
ರಕ್ಷಿಸೈನ್ಯಂ ನಿಕೃತ್ಯೋಭೌ ನಿಷ್ಕ್ರಾಂತೌ ಕಾರ್ಮುಕಾಲಯಾತ್ ॥ ೧೬ ॥

ಅಕ್ರೂರಾಗಮವೃತ್ತಾಂತಮುಪಲಭ್ಯ ತಥಾ ಧನುಃ ।
ಭಗ್ನಂ ಶ್ರುತ್ವಾಥ ಕಂಸೋಽಪಿ ಪ್ರಾಹ ಚಾಣೂರಮುಷ್ಟಿಕೌ ॥ ೧೭ ॥

---

೧೩. ಅನಂತರ ಅಂದವಾಗಿ ಗಂಧವನ್ನು ವಿಧವಿಧವಾದ ವಿನ್ಯಾಸದಲ್ಲಿ ಲೇಪಿಸಿಕೊಂಡು, ಬಣ್ಣಬಣ್ಣದ ಹೂವಿನ ದಂಡೆಗಳಿಂದ ಶೋಭಿಸುತ್ತಿರುವ ಆ ರಾಮಕೃಷ್ಣರಿಬ್ಬರೂ ಧನುಶ್ಶಾಲೆಗೆ ಬಂದರು.

೧೪. ಬಳಿಕ ಅವರಿಬ್ಬರೂ ಅಲ್ಲಿರುವ ಕಾವಲಿನವರನ್ನು ಕುರಿತು, ಪ್ರಖ್ಯಾತರಾದ ಧನುಶ್ರೇಷ್ಠವೆಲ್ಲಿ ಎಂದು ಕೇಳಿದರು. ಆ ಕಾವಲಿನವರು ಇದೊಂದು ಮಹಾಧನುಸ್ಸನ್ನು ತೋರಿಸಿದರು. ತತ್ಕ್ಷಣವೇ ಶ್ರೀಕೃಷ್ಣನು ಆ ಧನುಸ್ಸಿಗೆ ಕೈಹಾಕಿ ಸೆಳೆದುಕೊಂಡು ಅದನ್ನು ಹೆದೆಯೇರಿಸಿದನು.

೧೫. ಅವನು ಬಲವಾಗಿ ಬಗ್ಗಿಸಿ ಆ ಧನುಸ್ಸಿಗೆ ಹೆದೆಯನ್ನು ಏರಿಸುತ್ತಿರುವಾಗ, ಆ ಧನುಸ್ಸು ಮುರಿದುಹೋಯಿತು. ಆಗ ಬಹುಭಾರಿ ಶಬ್ದವಾಯಿತು. ಮಥುರೆಯೆಲ್ಲವೂ ಆ ಸದ್ದಿನಿಂದ ತುಂಬಿಹೋಯಿತು.

೧೬. ಆ ಧನುಸ್ಸು ಮುರಿಯುತ್ತಲೇ ಅಲ್ಲಿ ಕಾವಲಿದ್ದ ಸೈನಿಕರೆಲ್ಲರೂ ರಾಮಕೃಷ್ಣರಮೇಲೆ ಒಟ್ಟಿಗೆ ಏರಿ ಬಂದರು. ಆಗ ಅವರಿಬ್ಬರೂ, ಆ ಕಾವಲಿನ ಸೈನ್ಯವೆಲ್ಲವನ್ನೂ ಕತ್ತರಿಸಿ ಕೆಡಹಿ ಆ ಧನುಶ್ಶಾಲೆಯಿಂದ ಈಚೆಗೆ ಬಂದರು.

೧೭. ಇಷ್ಟರಲ್ಲಿ ಅಕ್ರೂರನು ಮಥುರೆಗೆ ಹಿಂದಿರುಗಿ ಬಂದ ವೃತ್ತಾಂತವೂ

॥ ಕಂಸ ಉವಾಚ ॥
ಗೋಪಾಲದಾರಕೌ ಪ್ರಾಪ್ತೌ ಭವದ್ಭ್ಯಾಂ ತೌ ಮಮಾಗ್ರತಃ ।
ಮಲ್ಲಯುದ್ಧೇನ ಹಂತವ್ಯೌ ಮಮ ಪ್ರಾಣಹರೌ ಹಿ ತೌ ॥ ೧೮ ॥

ನಿಯುದ್ಧೇ ತದ್ವಿನಾಶೇನ ಭವದ್ಭ್ಯಾಂ ತೋಷಿತೋ ಹ್ಯಹಂ ।
ದಾಸ್ಯಾಮ್ಯಭಿಮತಾನ್ಕಾಮಾನ್ನಾನ್ಯಥೈತನ್ಮಹಾಬಲೌ ॥ ೧೯ ॥

ನ್ಯಾಯತೋಽನ್ಯಾಯತೋ ವಾಪಿ ಭವದ್ಭ್ಯಾಂ ತೌ ಮಮಾಹಿತೌ ।
ಹಂತವ್ಯೌ ತದ್ವಧಾದ್ರಾಜ್ಯಂ ಸಾಮಾನ್ಯಂ ವೋ ಭವಿಷ್ಯತಿ ॥ ೨೦ ॥

॥ ವ್ಯಾಸ ಉವಾಚ ॥
ಇತ್ಯಾದಿಶ್ಯ ಸ ತೌ ಮಲ್ಲೌ ತತಶ್ಚಾಹೂಯ ಹಸ್ತಿಪಂ ।
ಪ್ರೋವಾಚೋಚ್ಚೈಸ್ತ್ವಯಾ ಮತ್ತಃ ಸಮಾಜದ್ವಾರಿ ಕುಂಜರಃ ॥ ೨೧ ॥

---

ಧನುಸ್ಸು ಮುರಿದುಹೋದ ಸಂಗತಿಯೂ ಕಂಸನಿಗೆ ತಿಳಿಯಲು ಅವನು ಚಾಣೂರ ಮುಷ್ಟಿಕರೆಂಬ ಜಟ್ಟಿಗಳನ್ನು ಕರೆದು ನುಡಿದನು.

೧೮-೨೦. ಎಲೈ ಬಲಶಾಲಿಗಳೇ, ಇಲ್ಲಿಗೆ ಆ ಗೋಪಾಲಕರಾದ ಬಾಲಕರು ಬಂದಿರುವರು. ಅವರು ನನ್ನ ಪ್ರಾಣವನ್ನು ಹರಣಮಾಡಲು ತೊಡಗಿರುವರು. ನೀವು ಅವರನ್ನು ನನ್ನ ಮುಂದೆ ಮಲ್ಲಯುದ್ಧದಲ್ಲಿ ಕೊಂದುಕೆಡುಹಬೇಕು. ಆ ಮಲ್ಲಯುದ್ಧದಲ್ಲಿ ಅವರೀರ್ವರೂ ಹತರಾದಮೇಲೆ ನಾನು ನಿಮಗೆ ಸುಪ್ರೀತನಾಗಿ ನೀವು ಕೇಳಿದುದನ್ನೆಲ್ಲಾ ಕೊಡುವೆನು. ಇದು ಎಂದಿಗೂ ಸುಳ್ಳಲ್ಲ. ನನ್ನ ಶತ್ರುಗಳಾದ ಆ ಗೊಲ್ಲ ಹುಡುಗರನ್ನು ನೀವು ನ್ಯಾಯದಿಂದಲಾದರೂ ಸರಿಯೇ ಅನ್ಯಾಯದಿಂದಲಾದರೂ ಸರಿಯೇ ಕೊಂದೇ ತೀರಬೇಕು. ಅವರನ್ನು ಕೊಂದುದೇ ಆದರೆ, ನಿಮ್ಮಿಬ್ಬರಿಗೂ ಈ ರಾಜ್ಯವು ಸಮಪಾಲು ದೊರೆಯಿತೆಂದೇ ತಿಳಿಯಿರಿ ಎಂದನು.

೨೧-೨೨. ಈರೀತಿ ಆ ಕಂಸನು ಆ ಜಟ್ಟಿಗಳಿಗೆ ಅಪ್ಪಣೆಮಾಡಿ ಕಳುಹಿಸಿಕೊಟ್ಟನಂತರ ಮಾವಟಿಗನನ್ನು ಕರೆದುಹೇಳಿದನು. ಆ ಗೋಪಾಲಬಾಲಕರು ಮಲ್ಲಯುದ್ಧಕ್ಕೋಸ್ಕರ ಆ ಕಾಳಗ ನಡೆಯುವಮಟ್ಟಿಯ ಬಳಿಗೆ ಬರುವರು.

ಸ್ಥಾಪ್ಯಃ ಕುವಲಯಾಪೀಡಸ್ತೇನ ತೌ ಗೋಪದಾರಕೌ ।
ಘಾತನೀಯೌ ನಿಯುದ್ಧಾಯ ರಂಗದ್ವಾರಮುಪಾಗತೌ ॥ ೨೨ ॥

ತಮಾಜ್ಞಾಪ್ಯಾಥ ದೃಷ್ಟ್ವಾ ಚ ಮಂಚಾನ್ಸರ್ವಾನುಪಾಕೃತಾನ್ ।
ಆಸನ್ನಮರಣಃ ಕಂಸಃ ಸೂರ್ಯೋದಯಮುದೈಕ್ಷತ ॥ ೨೩ ॥

ತತಃ ಸಮಸ್ತಮಂಚೇಷು ನಾಗರಃ ಸ ತದಾ ಜನಃ ।
ರಾಜಮಂಚೇಷು ಚಾರೂಢಾಃ ಸಹ ಭೃತ್ಯೈರ್ಮಹೀಭೃತಃ ॥ ೨೪ ॥

ಮಲ್ಲಪ್ರಾಶ್ನಿಕವರ್ಗಶ್ಚ ರಂಗಮಧ್ಯೇ ಸಮೀಪಗಃ ।
ಕೃತಃ ಕಂಸೇನ ಕಂಸೋಽಪಿ ತುಂಗಮಂಚೇ ವ್ಯವಸ್ಥಿತಃ ॥ ೨೫ ॥

---

ನೀನು ಆಗ ಅಲ್ಲಿ ನೆರೆದಿರುವ ಜನರ ಸಂದಣಿಯಮುಂದೆ ಆ ಮಟ್ಟೆಯ ಪ್ರವೇಶ ದ್ವಾರದಲ್ಲಿ ನಮ್ಮ ಮದಿಸಿದ ಕುವಲಯಾಪೀಡವೆಂಬ ಆನೆಯನ್ನು ನಿಲ್ಲಿಸಿ ಕೊಂಡು ಹೇಗಾದರೂ ಮಾಡಿ ಅವರನ್ನು ಸಂಹರಿಸಿಬಿಡು.

೨೩. ಎಂದು ಕಂಸನು ಅವನಿಗೆ ಅಪ್ಪಣೆಮಾಡಿ ಕಳುಹಿಸಿಕೊಟ್ಟನು ಬಳಿಕ ಅವನ ಅಪ್ಪಣೆಯಂತೆ ಕಾಳಗನಡೆಯುವ ಮಂಟಪದಬಳಿ ಆ ಆಸನಗಳೆಲ್ಲ ವನ್ನೂ ಸಿದ್ಧಗೊಳಿಸಿದರು. ಇದೆಲ್ಲವನ್ನೂ ನೋಡಿ ಮರಣವು ಸಮೀಪಿಸುತ್ತಿದ್ದ ಆ ಕಂಸನು ಸೂರ್ಯನು ಉದಯಿಸುವುದನ್ನೇ ಕಾಯುತ್ತಿದ್ದನು.

೨೪. (ಮಾರನೆಯದಿನ ಬೆಳಿಗ್ಗೆ) ಆ ಮಧುರಾನಗರದ ಜನರು ಆ ಮಟ್ಟೆಯಸುತ್ತಲೂ ಏರ್ಪಡಿಸಿದ್ದ ಪೀಠಗಳಲ್ಲಿ ತುಂಬತೊಡಗಿದರು. ರಾಜಾರ್ಹ ವಾದ ಆಸನಗಳಲ್ಲಿ ತಮ್ಮತಮ್ಮ ಸೇವಕರೊಡನೆ (ಸಾಮಂತ) ರಾಜರು ಕುಳಿತುಕೊಂಡರು.

೨೫. ಮಲ್ಲಯುದ್ಧದ ಸೋಲುಗೆಲವುಗಳನ್ನು ನಿರ್ಣಯಿಸುವ ಮಧ್ಯ ಸ್ಥರ ಗುಂಪು ಆ ಮಟ್ಟೆಯ ಸಮೀಪದಲ್ಲೇ ಮಧ್ಯಭಾಗದಲ್ಲಿ ಕಂಸನ ಅಪ್ಪಣೆ ಯಂತೆ ನಿಂನಿತು. ಕಂಸನೂ ಸಹ ಎತ್ತರವಾದ ರಾಜಾಸನದಲ್ಲಿ ಮಂಡಿ ಸಿದನು.

ಅಂತಃಪುರಾಣಾಂ ಮಂಚಾಶ್ಚ ಯಥಾನ್ಯೇ ಪರಿಕಲ್ಪಿತಾಃ ।
ಅನ್ಯೇ ಚ ವಾರಮುಖ್ಯಾನಾಮನ್ಯೇ ನಗರಯೋಷಿತಾಂ ॥ ೨೬ ॥

ನಂದಗೋಪಾದಯೋ ಗೋಪಾ ಮಂಚೇಷ್ವನ್ಯೇಷ್ವವಸ್ಥಿತಾಃ ।
ಅಕ್ರೂರವಸುದೇವೌ ಚ ಮಂಚಪ್ರಾಂತೇ ವ್ಯವಸ್ಥಿತೌ ॥ ೨೭ ॥

ನಗರೀಯೋಷಿತಾಂ ಮಧ್ಯೇ ದೇವಕೀ ಪುತ್ರಗರ್ಧಿನೀ ।
ಅಂತಕಾಲೇಽಪಿ ಪುತ್ರಸ್ಯ ದ್ರಕ್ಷ್ಯಾಮೀತಿ ಮುಖಂ ಸ್ಥಿತಾ ॥ ೨೮ ॥

ವಾದ್ಯಮಾನೇಷು ತೂರ್ಯೇಷು ಚಾಣೂರೇ ಚಾತಿವಲ್ಗತಿ ।
ಹಾಹಾಕಾರಪರೇ ಲೋಕ ಆಸ್ಫೋಟಯತಿ ಮುಷ್ಟಿಕೇ ॥ ೨೯ ॥

ಹತ್ವಾ ಕುವಲಯಾಪೀಡಂ ಹಸ್ತ್ಯಾರೋಹಪ್ರಚೋದಿತಂ ।
ಮದಾಸೃಗನುಲಿಪ್ತಾಂಗೌ ಗಜದಂತವರಾಯುಧೌ ॥ ೩೦ ॥

---

೨೬. ಆ ರಂಗಶಾಲೆಯಲ್ಲಿ ಅಂತಃಪುರಸ್ತ್ರೀಯರಿಗೇ ಬೇರೆಕಡೆ ಆಸನಗಳನ್ನು ಕಲ್ಪಿಸಿದ್ದರು. ವಾರಾಂಗನೆಯರಿಗೇ ಮತ್ತೊಂದು ಕಡೆ ಪೀಠಗಳನ್ನು ಬಿಟ್ಟಿದ್ದರು. ಉಳಿದ ನಗರಸ್ತ್ರೀಯರಿಗೇ ಇನ್ನೊಂದು ಕಡೆ ಆಸನಗಳನ್ನು ಗೊತ್ತುಪಡಿಸಿದ್ದರು.

೨೭. ನಂದಗೋಪ ಮೊದಲಾದ ಗೊಲ್ಲರೆಲ್ಲರೂ ಬೇರೆಬೇರೆ ಆಸನಗಳಲ್ಲಿ ಕುಳಿತಿದ್ದರು. ಅಕ್ರೂರನೂ ವಸುದೇವನೂ ಒಂದು ಆಸನದ ಕೊನೆಯಲ್ಲಿ ಒಕ್ಕಡೆ ಕುಳಿತಿದ್ದರು.

೨೮. ದೇವಕಿಯು ತನ್ನ ಮಗನನ್ನು ಕಾಣದೆ ಬಹುಕಾಲದಿಂದಲೂ ಹಂಬಲಿಸುತ್ತಿದ್ದಳು. ಕೊನೆಗಾಲದಲ್ಲಾದರೂ ತನ್ನ ಮಗನ ಮುಖವನ್ನು ಕಾಣುವೆನೆಂಬಾಸೆಯಿಂದ ನಗರಸ್ತ್ರೀಯರ ನಡುವೆ ಒಂದು ಕಡೆ ಕುಳಿತಿದ್ದಳು.

೨೯. ಆಗ ವಾದ್ಯಗಳು ಮೊಳಗತೊಡಗಿದವು. ಚಾಣೂರನು ಗರ್ವದಿಂದ ಮೆರೆಯುತ್ತಿದ್ದನು. ಮುಷ್ಟಿಕನು ತನ್ನ ಬಾಹುಗಳನ್ನು ತಟ್ಟಿಕೊಳ್ಳುತ್ತಿದ್ದನು. ಜನರೆಲ್ಲರೂ ಅದನ್ನು ನೋಡಿ ಹಾಹಾಕಾರವನ್ನು ಮಾಡುತ್ತಿದ್ದರು.

೩೦-೩೧. ಆ ಸಮಯದಲ್ಲಿ ಕಂಸನಿಂದ ಪ್ರೇರಿತನಾದ ದುಷ್ಟಮಾವಟಿಗನಿಂದ ತಮ್ಮ ಮೇಲೆ ನುಗ್ಗಿಸಲ್ಪಟ್ಟ ಕುವಲಯಾಪೀಠವೆಂಬ ಮದ್ದಾನೆಯನ್ನು

ಮೃಗಮಧ್ಯೇ ಯಥಾ ಸಿಂಹೌ ಗರ್ವಲೀಲಾವಲೋಕಿನೌ ।
ಪ್ರವಿಷ್ಟೌ ಸುಮಹಾರಂಗಂ ಬಲದೇವಜನಾರ್ದನೌ ॥ ೩೧ ॥

ಹಾಹಾಕಾರೋ ಮಹಾನ್ ಜಜ್ಞೇ ಸರ್ವರಂಗೇಷ್ವನಂತರಂ ।
ಕೃಷ್ಣೋಽಯಂ ಬಲಭದ್ರೋಽಯಮಿತಿ ಲೋಕಸ್ಯ ವಿಸ್ಮಯಾತ್ ॥ ೩೨ ॥

ಸೋಽಯಂ ಯೇನ ಹತಾ ಘೋರಾ ಪೂತನಾ ಸಾ ನಿಶಾಚರೀ ।
ಪ್ರಕ್ಷಿಪ್ತಂ ಶಕಟಂ ಯೇನ ಭಗ್ನೌ ಚ ಯಮಲಾರ್ಜುನೌ ॥ ೩೩ ॥

ಸೋಽಯಂ ಯಃ ಕಾಲಿಯಂ ನಾಗಂ ನನರ್ತಾರುಹ್ಯ ಬಾಲಕಃ ।
ಧೃತೋ ಗೋವರ್ಧನೋ ಯೇನ ಸಪ್ತರಾತ್ರಂ ಮಹಾಗಿರಿಃ ॥ ೩೪ ॥

ಅರಿಷ್ಟೋ ಧೇನುಕಃ ಕೇಶೀ ಲೀಲಯೈವ ಮಹಾತ್ಮನಾ ।
ಹತೋ ಯೇನ ಚ ದುರ್ವೃತ್ತೋ ದೃಶ್ಯತೇ ಸೋಽಯಮುಚ್ಯತಃ ॥ ೩೫ ॥

---

ಕೊಂದು, ಅದರ ಮದೋದಕದಿಂದಲೂ, ರಕ್ತದಿಂದಲೂ ತೊಯ್ದುಹೋದ ಶರೀರ ಉಳ್ಳವರಾದ ಬಲರಾಮಕೃಷ್ಣರು, ಆ ಆನೆಯ ದಂತವನ್ನೇ ಕಿತ್ತುಕೊಂಡು ಆಯುಧವನ್ನಾಗಿ ಮಾಡಿಕೊಂಡು, ಮೃಗಗಳ ನಡುವೆ ಬರುವ ಸಿಂಹಗಳಂತೆ ದಿಟ್ಟತನದಿಂದ ನೋಡುತ್ತಾ ತುಂಬಿದ್ದ ಆ ರಂಗಸ್ಥಲವನ್ನು ಪ್ರವೇಶಿಸಿದರು.

೩೨. ಆಗ ಅವರನ್ನು ಕಂಡು ಆ ರಂಗದಲ್ಲಿದ್ದ ಜನರೆಲ್ಲರೂ ಸಂಭ್ರಮದಿಂದ "ಇವನೇ ಕೃಷ್ಣನು, ಇವನೇ ಬಲರಾಮನು" ಎಂಬುದಾಗಿ ಗಟ್ಟಿಯಾಗಿ ಕೋಲಾಹಲವನ್ನು ಮಾಡಿದರು.

೩೩-೩೫. ಭಯಂಕರವಾದ ಆಕೃತಿಯುಳ್ಳ ಪೂತನೆಯೆಂಬ ರಾಕ್ಷಸಿಯು ಯಾವನಿಂದ ಕೊಲ್ಲಲ್ಪಟ್ಟಳೋ, ಯಾವನು ಶಕಟಾಸುರನನ್ನೂ ತನ್ನ ಪಾದ ಪ್ರಹಾರದಿಂದ ದೂರಕ್ಕೆ ಎಸೆದುಬಿಟ್ಟನೋ, ಯಾವನು ಯಮಳಾರ್ಜುನವೃಕ್ಷಗಳನ್ನು (ಜೋಡಿ ಬಿಳಿಮತ್ತಿಮರಗಳು) ಲೀಲಾಮಾತ್ರದಿಂದ ಮುರಿದು ಕೆಡವಿದನೋ ಅವನೇ ಇವನು. ಯಾವ ಬಾಲಕನು ಕಾಲಿಯಸರ್ಪದ ಮೇಲೆ ಧುಮುಕಿ ಅದರ ಮೇಲೆ ಕುಣಿದಾಡಿದನೋ, ಮತ್ತು ಯಾವನು ಏಳು ದಿವಸಗಳು ಗೋವರ್ಧನವೆಂಬ ಮಹಾಪರ್ವತವನ್ನು ತನ್ನ ಕಿರಿಬೆರಳಿನಿಂದ ಎತ್ತಿ ಹಿಡಿದನೋ ಅವನೇ ಇವನು. ಯಾವ ಮಹಾತ್ಮನು ತನ್ನ ಲೀಲಾಮಾತ್ರ

ಅಯಂ ಚಾಸ್ಯ ಮಹಾಬಾಹುರ್ಬಲದೇವೋsಗ್ರಜೋsಗ್ರತಃ ।
ಪ್ರಯಾತಿ ಲೀಲಯಾ ಯೋಷಿನ್ಮನೋನಯನನಂದನಃ ॥ ೩೬ ॥

ಅಯಂ ಸ ಕಥ್ಯತೇ ಪ್ರಾಜ್ಞೈಃ ಪುರಾಣಾರ್ಥಾವಲೋಕಿಭಿಃ ।
ಗೋಪಾಲೋ ಯಾದವಂ ವಂಶಂ ಮಗ್ನಮಭ್ಯುದ್ಧರಿಷ್ಯತಿ ॥ ೩೭ ॥

ಅಯಂ ಸ ಸರ್ವಭೂತಸ್ಯ ವಿಷ್ಣೋರಖಿಲಜನ್ಮನಃ ।
ಅವತೀರ್ಣೋ ಮಹೀಮಂಶೋ ನೂನಂ ಭಾರಹರೋ ಭುವಃ ॥ ೩೮ ॥

ಇತ್ಯೇವಂ ವರ್ಣಿತೇ ಪೌರೈ ರಾಮೇ ಕೃಷ್ಣೇ ಚ ತತ್ಕ್ಷಣಾತ್ ।
ಉರಸ್ತತಾಪ ದೇವಕ್ಯಾಃ ಸ್ನೇಹಸ್ನುತಪಯೋಧರಂ ॥ ೩೯ ॥

---

ದಿಂದಲೇ ದುಷ್ಟನಾದ ಅರಿಷ್ಟನನ್ನೂ, ಧೇನುಕನನ್ನೂ ಕೊಂದು ಕೆಡಹಿದನೋ ಆ ಅಚ್ಯುತನು ಇದೋ ನಮ್ಮ ಕಣ್ಣುಗಳಿಗೆ ಗೋಚರನಾಗಿರುವನು.

೩೬. ಇದೋ ಇಲ್ಲಿ ಮಹಾಬಾಹುವೂ, ಕೃಷ್ಣನ ಅಣ್ಣನೂ ಆದ ಬಲರಾಮನು ನಗರಸ್ತ್ರೀಯರ ಮನಸ್ಸಿಗೂ ನಯನಗಳಿಗೂ ಆನಂದವನ್ನುಂಟು ಮಾಡುತ್ತಾ ಲೀಲೆಯಿಂದ ಅವನ ಮುಂದುಗಡೆ ಬರುತ್ತಿರುವನು.

೩೭. ಪುರಾಣದ ಅರ್ಥವನ್ನು ಚೆನ್ನಾಗಿಬಲ್ಲ ಪ್ರಾಜ್ಞರುಈ ಗೋಪಾಲ (ಕೃಷ್ಣ) ನೇ ದುಃಖದಲ್ಲಿ ಮುಳುಗಿಹೋಗಿರುವ ಯಾದವವಂಶವನ್ನು ಉದ್ಧಾರ ಮಾಡುವವನೆಂದು ಈತನನ್ನು ಹೊಗಳಿರುವರು.

೩೮. ಈ ಭೂಮಂಡಲದ ಭಾರವನ್ನು ಪರಿಹರಿಸಲು, ಸರ್ವಪ್ರಾಣಿಗಳಲ್ಲಿಯೂ ನೆಲೆಸಿರುವ, ಆ ಮಹಾವಿಷ್ಣುವಿನ ಅಂಶವೇ ಭೂಮಿಯಲ್ಲಿ ಈ ಶ್ರೀಕೃಷ್ಣನ ರೂಪವಾಗಿ ಅವತರಿಸಿರುವುದು. (ಈ ಶ್ರೀಕೃಷ್ಣನು ಮತ್ತಾರೂ ಅಲ್ಲ ಸರ್ವಪ್ರಾಣಿಗಳಲ್ಲಿಯೂ ನೆಲೆಸಿರುವವನೂ, ಸರ್ವಕಾರಣನೂ ಆದ ಆ ಮಹಾವಿಷ್ಣುವೇ ತನ್ನ ಭೂಭಾರವನ್ನು ಪರಿಹಾರಮಾಡಲು ಈತನ ರೂಪದಲ್ಲಿ ಭೂಮಿಯಲ್ಲವತರಿಸಿರುವನು).

೩೯. ಎಂಬುದಾಗಿ ಮಧುರಾನಗರದ ಜನರೆಲ್ಲರೂ ಆ ಬಲರಾಮಕೃಷ್ಣರನ್ನೂ ಹೊಗಳುತ್ತಿರಲು ದೇವಕಿಯ ಎದೆಯು ದುಃಖದಿಂದ ತಳಮಳಗೊಂಡಿತು. ಪುತ್ರಸ್ನೇಹದಿಂದ ಆಕೆಯ ಸ್ತನಗಳಿಂದ ಹಾಲುಕ್ಕಿ ಸುರಿಯಲಾರಂಭವಾಯಿತು.

ಮಹೋತ್ಸವಮಿವಾಲೋಕ್ಯ ಪುತ್ರಮೇವ ವಿಲೋಕಯನ್ ।
ಯುವೇವ ವಸುದೇವೋऽಭೂದ್ವಿಹಾಯಾಭ್ಯಾಗತಾಂ ಜರಾಂ ॥ ೪೦ ॥

ವಿಸ್ತಾರಿತಾಕ್ಷಿಯುಗಲಾ ರಾಜಾಂತಃಪುರಯೋಷಿತಃ ।
ನಾಗರಸ್ತ್ರೀಸಮೂಹಶ್ಚ ದ್ರಷ್ಟುಂ ನ ವಿರರಾಮ ತೌ ॥ ೪೧ ॥

॥ ಸ್ತ್ರಿಯ ಊಚುಃ ॥

ಸಖ್ಯಃ ಪಶ್ಯತ ಕೃಷ್ಣಸ್ಯ ಮುಖಮುಷ್ಮಂಬುಜೇಕ್ಷಣಂ ।
ಗಜಯುದ್ಧಕೃತಾಯಾಸಸ್ವೇದಾಂಬುಕಣಿಕಾಂಚಿತಂ ॥ ೪೨ ॥

ವಿಕಾಸೀವ ಸರಾಂಭೋಜಮವಶ್ಯಾಯಜಲೋಕ್ಷಿತಂ ।
ಪರಿಭೂತಾಕ್ಷರಂ ಜನ್ಮ ಸಫಲಂ ಕ್ರಿಯತಾಂ ದೃಶಃ ॥ ೪೩ ॥

---

೪೦. ವಸುದೇವನೂ ಸಹ ತನ್ನ ಮಕ್ಕಳನ್ನು ಕಂಡೊಡನೆಯೇ ಹಬ್ಬದಂತೆ ಸಂಭ್ರಮಪಡುತ್ತಾ ಅವರನ್ನೇ ನೋಡುತ್ತಿದ್ದನು. ಆಗ ಅವನು ಮುದುಕನಾಗಿದ್ದರೂ ಆ ಮುಪ್ಪನ್ನು ಬಿಟ್ಟುಬಿಟ್ಟ ಹುಡುಗನಂತಾಗಿದ್ದನು.

೪೧. ಕಂಸನ ಅಂತಃಪುರದಲ್ಲಿದ್ದ ರಾಜಸ್ತ್ರೀಯರೂ, ಮಧುರಾಪಟ್ಟಣದ ಸ್ತ್ರೀಯರೂ ಸಹ ದೊಡ್ಡದೊಡ್ಡದಾಗಿ ತೆರೆದ ಕಣ್ಣುಗಳಿಂದ ರಾಮಕೃಷ್ಣರನ್ನು ಎಷ್ಟುನೋಡಿದರೂ ತೃಪ್ತಿಯಿಲ್ಲದಂತೆ ಬಿಡುವಿಲ್ಲದೆ ನೋಡುತ್ತಿದ್ದರು.

೪೨–೪೩. ಆಗ ಹೆಂಗಸರೆಲ್ಲರೂ ಈರೀತಿ ಪರಸ್ಪರ ಮಾತನಾಡಿಕೊಳ್ಳುತ್ತಿದ್ದರು. ಎಲೈ ಸಖಿಯರೇ, ಕಮಲದಂತೆ ಕಣ್ಣುಗಳುಳ್ಳ ಶ್ರೀಕೃಷ್ಣನ ಮುಖವನ್ನು ನೋಡಿರಿ. ಕುವಲಯಾಪೀಡವೆಂಬ ಆನೆಯೊಡನೆ ಹೋರಾಡಿದುದರಿಂದ ಉಂಟಾದ ಆಯಾಸದಿಂದ ಸಣ್ಣಸಣ್ಣ ಬೆವರುಹನಿಗಳು ಮುಖಮಂಡಲವನ್ನು ಅಲಂಕರಿಸಿವೆ. ಈಗ ಈ ಮುಖವು, ಹಿಮದ ಕಣಗಳು ಅಲ್ಲಲ್ಲಿ ಅಂಟಿಕೊಂಡಿರುವ ಅರಳಿದ ತಾವರೆಯನ್ನು ಹೋಲುತ್ತಿರುವುದು. ಕೃಷ್ಣನನ್ನು ನೋಡುವ ನಮ್ಮ ಈ ಮನುಷ್ಯಜನ್ಮವು ಸಾವಿಲ್ಲದ (ನಾಶವಿಲ್ಲದ) ದೇವತೆಗಳಿಗಿಂತಲೂ ಮೇಲು. ನಿಮ್ಮ ಕಣ್ಣುಗಳನ್ನು ಸಾರ್ಥಕಪಡಿಸಿಕೊಳ್ಳಿರಿ.

ಶ್ರೀವತ್ಸಾಂಕಂ ಜಗದ್ಧಾಮ ಬಾಲಸ್ಯೈತದ್ವಿಲೋಕ್ಯತಾಂ ।
ವಿಪಕ್ಷಕ್ಷಪಣಂ ವಕ್ಷೋ ಭುಜಯುಗ್ಮಂ ಚ ಭಾಮಿನಿ ॥ ೪೪ ॥

ವಲ್ಗತಾ ಮುಷ್ಟಿಕೇನೈವ ಚಾಣೂರೇಣ ತಥಾ ಪರೈಃ ।
ಕ್ರೀಯತೇ ಬಲಭದ್ರಸ್ಯ ಹಾಸ್ಯಮೀಷದ್ವಿಲೋಕ್ಯತಾಂ ॥ ೪೫ ॥

ಸಖ್ಯಃ ಪಶ್ಯತ ಚಾಣೂರಂ ನಿಯುದ್ಧಾರ್ಥಮಯಂ ಹರಿಃ ।
ಸಮುಪೈತಿ ನ ಸಂತ್ಯತ್ರ ಕಿಂ ವೃದ್ಧಾ ಯುಕ್ತಕಾರಿಣಃ ॥ ೪೬ ॥

ಕ್ವ ಯೌವನೋನ್ಮುಖೀಭೂತಃ ಸುಕುಮಾರತನುರ್ಹರಿಃ ।
ಕ್ವ ವಜ್ರಕಠಿನಾಭೋಗಶರೀರೋಽಯಂ ಮಹಾಸುರಃ ॥ ೪೭ ॥

ಇಮೌ ಸುಲಲಿತೌ ರಂಗೇ ವರ್ತೇತೇ ನವಯೌವನೌ ।
ದೈತೇಯಮಲ್ಲಾಶ್ಚಾಣೂರಪ್ರಮುಖಾಸ್ತ್ವತಿದಾರುಣಾಃ ॥ ೪೮ ॥

---

೪೪. ಎಲೌ ಭಾಮಿನಿಯೇ, ಶ್ರೀವತ್ಸವೆಂಬ ಮಚ್ಚೆಯಿಂದ ಭೂಷಿತವಾಗಿಯೂ ಸಕಲ ಜಗತ್ತಿಗೂ ನಿವಾಸಭೂತವಾಗಿಯೂ ಇರುವಂತಹ ಈ ಬಾಲಕನ ಎದೆಯನ್ನು ನೋಡು. ಶತ್ರುಗಳನ್ನೂ ಮರ್ದಿಸುವಂತಹ ಆತನ ಬಾಹುಗಳನ್ನೂ ನೋಡು.

೪೫. ನೋಡು ಅತ್ತಕಡ, ಅಹಂಕಾರದಿಂದ ಮುಷ್ಟಿಕನೂ ಚಾಣೂರನೂ ಮತ್ತು ಅವರ ಕಡೆಯವರಾದ ಇತರರೂ ಬೀಸುತ್ತಿರುವುದನ್ನು ಕಂಡು ಬಲಭದ್ರನು ಅವರನ್ನು ಲಕ್ಷ್ಯಮಾಡದೆ ಅಪಹಾಸ್ಯಮಾಡುತ್ತಿರುವನು. ಸ್ವಲ್ಪ ನೋಡು.

೪೬. ಎಲೌ ಗೆಳತಿಯರೇ, ನೋಡಿರಿ, ಈ ಶ್ರೀಕೃಷ್ಣನು ಮಲ್ಲಯುದ್ಧಕ್ಕೋಸ್ಕರ ಚಾಣೂರನ ಬಳಿಗೆ ಹೋಗುತ್ತಿರುವನು. ಏನು ? ಇಲ್ಲಿ ಯುಕ್ತಾಯುಕ್ತತೆಯನ್ನು ವಿವೇಚಿಸಬಲ್ಲ ಹಿರಿಯರಾರೂ ಇಲ್ಲವೇ ?

೪೭. ಈಗತಾನೇ ಬಾಲ್ಯವನ್ನು ಕಳೆದು ಯೌವನದಲ್ಲಿ ಕಾಲಿಡುತ್ತಿರುವ ಸುಕುಮಾರ ಶರೀರನಾದ ಕೃಷ್ಣನೆಲ್ಲಿ ? ವಜ್ರಾಯುಧದಂತೆ ಕರ್ಕಶ (ಕಠಿಣ) ವಾದ ಮಹಾದೇಹವುಳ್ಳ ಆ ರಾಕ್ಷಸನೆಲ್ಲಿ ?

೪೮. ಹೊಸದಾಗಿ ಯೌವನದಲ್ಲಿ ಪದಾರ್ಪಣಮಾಡುತ್ತಿರುವ ಸುಕು

ನಿಯುದ್ಧಪ್ರಾಶ್ನಿಕಾನಾಂ ತು ಮಹಾನೇಷ ವ್ಯತಿಕ್ರಮಃ ।
ಯದ್ಬಾಲಬಲಿನೋರ್ಯುದ್ಧಂ ಮಧ್ಯಸ್ಥೈಃ ಸಮುಪೇಕ್ಷ್ಯತೇ ॥ ೪೯ ॥

॥ ವ್ಯಾಸ ಉವಾಚ ॥

ಇತ್ಥಂ ಪುರಸ್ತ್ರೀಲೋಕಸ್ಯ ವದತಶ್ಚಾಲಯನ್ಭುವಂ ।
ವವರ್ಷ ಹರ್ಷೋತ್ಕರ್ಷಂ ಚ ಜನಸ್ಯ ಭಗವಾನ್ಹರಿಃ ॥ ೫೦ ॥

ಬಲಭದ್ರೋಽಪಿ ಚಾಸ್ಫೋಟ್ಯ ವವಲ್ಗ ಲಲಿತಂ ಯದಾ ।
ಪದೇ ಪದೇ ತದಾ ಭೂಮಿರ್ನ ಶೀರ್ಣಾ ಯತ್ತದದ್ಭುತಂ ॥ ೫೧ ॥

ಚಾಣೂರೇಣ ತತಃ ಕೃಷ್ಣೋ ಯುಯುಧೇಽಮಿತವಿಕ್ರಮಃ ।
ನಿಯುದ್ಧಕುಶಲೋ ದೈತ್ಯೋ ಬಲದೇವೇನ ಮುಷ್ಟಿಕಃ ॥ ೫೨ ॥

---

ಮಾರರು ಮಲ್ಲಯುದ್ಧಕ್ಕೆಂದು ರಂಗಕ್ಕಿಳಿದಿರುವರು. ಚಾಣೂರನೇ ಮೊದಲಾದ ರಾಕ್ಷಸಜೆಟ್ಟಿಗಳೆಲ್ಲರೂ ಬಹುಭಯಂಕರರಾದವರು.

೪೯. ಈ ಕಾಳಗವನ್ನು ಏರ್ಪಡಿಸಿದ ಮಧ್ಯಸ್ಥರು (ಪರೀಕ್ಷಕರು) ಎಂತಹ ಭಾರಿ ಪ್ರಮಾದವನ್ನುಮಾಡಿಬಿಟ್ಟಿರುವರು? ಏಕೆಂದರೆ ಬಲಾಢ್ಯರಾದವರು ಬಾಲಕರೊಡನೆ ಸೆಣಸುವುದನ್ನು ಈ ಮಧ್ಯಸ್ಥರು ತಪ್ಪಿಸದೆ ಉಪೇಕ್ಷೆ ಮಾಡಿರುವರಲ್ಲಾ!

೫೦. ಈರೀತಿಯಾಗಿ ಪುರಾಂಗನೆಯರು ಪರಸ್ಪರ ಮಾತನಾಡುತ್ತಿರುವಂತೆಯೇ ಭಗವಂತನಾದ ಶ್ರೀಕೃಷ್ಣನು (ಪಾದವಿಕ್ಷೇಪದಿಂದ) ಭೂಮಿಯನ್ನು ನಡಗಿಸುತ್ತಾ ಜನರಿಗೆಲ್ಲರಿಗೂ ಹರ್ಷವುಕ್ಕುವಂತೆ ಮಾಡಿದನು.

೫೧. ಹಾಗೆಯೇ ಬಲರಾಮನೂ ಕೂಡ ತನ್ನ ಬಾಹುಗಳನ್ನೂ ಅಸ್ಫಾಲನೆಮಾಡಿ (ತಟ್ಟಿ) ತನ್ನ ಮೈಯನ್ನು ಜಗ್ಗಿಸುತ್ತಾ ಮುಂದೆ ಬಂದನು. ಆಗ ಅವನಿಟ್ಟ ಹೆಜ್ಜೆಹೆಜ್ಜೆಗೂ ಭೂಮಿಯು ಬಿರಿಯದೇ ಇದ್ದುದೇ ಬಹು ಆಶ್ಚರ್ಯ.

೫೨. ಅನಂತರ ಮಹಾಪರಾಕ್ರಮಶಾಲಿಯಾದ ಶ್ರೀಕೃಷ್ಣನು ಚಾಣೂರನೊಡನೆ ಹೋರಾಡಲು ನಿಂತನು. ಮಲ್ಲಯುದ್ಧದಲ್ಲಿ ನಿಪುಣನಾದ ಮುಷ್ಟಿಕನೆಂಬ ದೈತ್ಯನು ಬಲರಾಮನೊಡನೆ ಯುದ್ಧಕ್ಕೆ ನಿಂತನು.

ಸಂನಿಪಾತಾವಧೂತೈಶ್ಚ ಚಾಣೂರೇಣ ಸಮಂ ಹರಿಃ ।
ಕ್ಷೇಪಣೈರ್ಮುಷ್ಟಿಭಿಶ್ಚೈವ ಕೀಲಾವಜ್ರನಿಪಾತನೈಃ ॥ ೫೩ ॥

ಪಾದೋದ್ಧೂತೈಃ ಪ್ರಮೃಷ್ಟಾಭಿಸ್ತಯೋರ್ಯುದ್ಧಮಭೂನ್ಮಹತ್ ।
ಅಶಸ್ತ್ರಮತಿಘೋರಂ ತತ್ತಯೋರ್ಯುದ್ಧಂ ಸುದಾರುಣಂ ॥ ೫೪ ॥

ಸ್ವಬಲಪ್ರಾಣನಿಷ್ಪಾದ್ಯಂ ಸಮಾಜೋತ್ಸವಸಂನಿಧೌ ।
ಯಾವದ್ಯಾವಚ್ಚ ಚಾಣೂರೋ ಯುಯುಧೇ ಹರಿಣಾ ಸಹ ॥ ೫೫ ॥

ಪ್ರಾಣಹಾನಿಮವಾಪಾಗ್ರ್ಯಾಂ ತಾವತ್ತಾವನ್ನ ಬಾಂಧವಂ ।
ಕೃಷ್ಣೋಽಪಿ ಯುಯುಧೇ ತೇನ ಲೀಲಯೈವ ಜಗನ್ಮಯಃ ॥ ೫೬ ॥

---

೫೩–೫೪. ಆಗ ಅವರೀರ್ವರಿಗೂ ಬಹು ಭಾರಿಯಾದ ಕಾಳಗವು ಜರುಗಿತು. ಅವರುಗಳು ಯಾವ ಆಯುಧಗಳನ್ನೂ ಉಪಯೋಗಿಸದಿದ್ದರೂ ಅದು ಬಹು ಭಯಂಕರವಾಗಿತ್ತು. ಒಮ್ಮೆ ಕೃಷ್ಣನು ಚಾಣೂರನನ್ನು ಬೀಳಿಸುವನು. ಒಂದುಸಲ ನೂಕುವನು. ಇನ್ನೊಮ್ಮೆ (ಚೆಂಡಿನಂತೆ) ಮೇಲಕ್ಕೆಸೆಯುವನು, ಮತ್ತೊಮ್ಮೆ ಕೈಯ ಬೆರಳುಗಳನ್ನು ಕೀಲದಂತೆಯೂ ವಜ್ರದಂತೆಯೂ ಹಿಡಿದು ಅದರಿಂದ ಹೊಡೆಯುವನು. ಒಂದುಸಲ ಕಾಲಿನಿಂದ ಒದೆಯುವನು. ಇನ್ನೊಂದುಸಲ ಅಂಗೈಯಿಂದ ಅಪ್ಪಳಿಸುವನು. ಹೀಗೆ ಅವರಿಗೆ ಬಹು ದೊಡ್ಡ ಹೋರಾಟವು ನಡೆಯಿತು.

೫೫-೫೬. ತುಂಬಿದ್ದ ಆ ರಂಗಸ್ಥಲದಲ್ಲಿ ಚಾಣೂರನೂ ಸಹ ತನ್ನ ಬಲವೆಲ್ಲವನ್ನೂ ಬಿಟ್ಟು ಹೋರಾಡಿದನು. ಆದರೇನು? ಅವನು ಎಷ್ಟೆಷ್ಟು ಶಕ್ತಿಯಿಂದ ಹೋರಾಡಿದರೂ ಅಷ್ಟೂ ಅಷ್ಟು ಅವನಿಗೆ ಶಕ್ತಿಯು ಕುಂದುತ್ತ ಬಂದಿತೇ ಹೊರತು ಸ್ವಲ್ಪವೂ ಉಪಯೋಗವಾಗಲಿಲ್ಲ. ಆ ಜಗನ್ಮಯನಾದ ಶ್ರೀಕೃಷ್ಣನು ಅವನೊಡನೆ ಸ್ವಲ್ಪವೂ ಆಯಾಸಪಡದೆ ಲೀಲೆಯಿಂದ ಆಟದಂತೆ ಹೋರಾಡಿದನು.

ಖೇದಾಚ್ಚಾಲಯತಾ ಕೋಪಾನ್ನಿಜಶೇಷಕರೇ ಕರಂ ।
ಬಲಕ್ಷಯಂ ವಿವೃದ್ಧಿಂ ಚ ದೃಷ್ಟ್ವಾ ಚಾಣೂರಕೃಷ್ಣಯೋಃ ॥ ೫೭ ॥

ವಾರಯಾಮಾಸ ತೂರ್ಯಾಣಿ ಕಂಸಃ ಕೋಪಪರಾಯಣಃ ।
ಮೃದಂಗಾದಿಷು ವಾದ್ಯೇಷು ಪ್ರತಿಷಿದ್ಧೇಷು ತತ್ಕ್ಷಣಾತ್ ॥ ೫೮ ॥

ಖಸಂಗತಾನ್ಯವಾದ್ಯಂತ ದೈವತೂರ್ಯಾಣ್ಯನೇಕಶಃ ।
ಜಯ ಗೋವಿಂದ ಚಾಣೂರಂ ಜಹಿ ಕೇಶವ ದಾನವಂ ॥ ೫೯ ॥

ಇತ್ಯಂತರ್ಧಿಗತಾ ದೇವಾಸ್ತುಷ್ಟುವುಸ್ತೇ ಪ್ರಹರ್ಷಿತಾಃ ।
ಚಾಣೂರೇಣ ಚಿರಂ ಕಾಲಂ ಕ್ರೀಡಿತ್ವಾ ಮಧುಸೂದನಃ ॥ ೬೦ ॥

ಉತ್ಪಾಟ್ಯ ಭ್ರಾಮಯಾಮಾಸ ತದ್ವಧಾಯ ಕೃತೋದ್ಯಮಃ ।
ಭ್ರಾಮಯಿತ್ವಾ ಶತಗುಣಂ ದೈತ್ಯಮಲ್ಲಮಮಿತ್ರಜಿತ್ ॥ ೬೧ ॥

---

೫೭. ಆಗ ಚಾಣೂರನು ಖೇದದಿಂದಲೂ ಕೋಪದಿಂದಲೂ, ತನ್ನ ಕೈಯನ್ನು ಹಿಸುಕಿಕೊಳ್ಳುವಂತಾಯಿತು. ಆಗ ಕಂಸನು ಚಾಣೂರನ ಬಲವು ಕುಗ್ಗುತ್ತಿರುವುದನ್ನೂ ಕೃಷ್ಣನ ಬಲವು ಹೆಚ್ಚುತ್ತಿರುವುದನ್ನೂ ಗಮನಿಸಿದನು.

೫೮-೬೦. ಆಗ ಅವನಿಗೆ ಕೋಪವು ಮೇರೆ ಮೀರಿತು. ಬಳಿಕ ಅವನು ಬಾಜಿಸುತ್ತಿದ್ದ ವಾದ್ಯಗಳೆಲ್ಲವನ್ನೂ ತಟ್ಟನೆ ನಿಲ್ಲಿಸುವಂತೆ ಆಜ್ಞೆಮಾಡಿದನು. ಹೀಗೆ ಕಂಸನ ಅಪ್ಪಣೆಯಿದ ಯಾವಾಗ ಮೃದಂಗ ಮೊದಲಾದ ವಾದ್ಯಗಳೆಲ್ಲವೂ ನಿಲ್ಲಿಸಲ್ಪಟ್ಟವೋ, ಅಗ ಆಕಾಶದಲ್ಲಿ ದೇವತೆಗಳ ವಾದ್ಯಗಳೆಲ್ಲವೂ ಗುಂಪುಗುಂಪಾಗಿ ಬಾಜಿಸತೊಡಗಿದುವು. ಆಗ ಕಣ್ಣಿಗೆ ಕಾಣದಂತೆ ಆಕಾಶದಲ್ಲಿ ಅಂತರ್ಹಿತರಾಗಿದ್ದ ದೇವತೆಗಳೆಲ್ಲರೂ ಶ್ರೀಕೃಷ್ಣನನ್ನು ಕುರಿತು ಎಲೈ ಗೋವಿಂದನೇ, ನೀನು ಜಯಶೀಲನಾಗು, ಎಲೈ ಕೇಶವನೇ ಈ ದುಷ್ಟ ರಾಕ್ಷಸನನ್ನು ಸಂಹರಿಸು ಎಂಬುದಾಗಿ ಸಂತೋಷದಿಂದ ಹುರಿದುಂಬಿಸತೊಡಗಿದರು. ಹೀಗೆ ಬಹುಹೊತ್ತು ಶ್ರೀಕೃಷ್ಣನು ಚಾಣೂರನನ್ನು ಆಟವಾಡಿಸಿದನು.

೬೧-೬೩. ಬಳಿಕ ಚಾಣೂರನನ್ನು ಕೊಲ್ಲಬೇಕೆಂದು ಮನಸ್ಸುಮಾಡಿದನು. ಆಗ ಶತ್ರುಸೂದನನು ದೈತ್ಯರಲ್ಲೆಲ್ಲಾ ಹೆಸರಾಗಿದ್ದ ಆ ಜಟ್ಟಿಯನ್ನು

ಭ್ರಾಮಯಾಮಾಸ ಗಗನೇ ಗತಜೀವಿತಂ ।
ಭ್ರಾಮಯಾಸ್ಫೋಟಿತಸ್ತೇನ ಚಾಣೂರಃ ಶತಧಾ ಭವನ್ ॥ ೬೨ ॥

ರಕ್ತಸ್ರಾವಮಹಾಪಂಕಾಂ ಚಕಾರ ಸ ತದಾ ಭುವಂ ।
ಬಲದೇವಸ್ತು ತತ್ಕಾಲಂ ಮುಷ್ಟಿಕೇನ ಮಹಾಬಲಃ ॥ ೬೩ ॥

ಯುಯುಧೇ ದೈತ್ಯಮಲ್ಲೇನ ಚಾಣೂರೇಣ ಯಥಾ ಹರಿಃ ।
ಸೋಽಪ್ಯೇನಂ ಮುಷ್ಟಿನಾ ಮೂರ್ಧ್ನಿ ವಕ್ಷಸ್ಯಾಹತ್ಯ ಜಾನುನಾ ॥ ೬೪ ॥

ಪಾತಯಿತ್ವಾ ಧರಾಪೃಷ್ಠೇ ನಿಷ್ಪಿಪೇಷ ಗತಾಯುಷಂ ।
ಕೃಷ್ಣಸ್ತೋಶಲಕಂ ಭೂಯೋ ಮಲ್ಲರಾಜಂ ಮಹಾಬಲಂ ॥ ೬೫ ॥

---

ಕಾಲುಗಳಲ್ಲಿ ಹಿಡಿದುಕೊಂಡು ಮೇಲಕ್ಕೆತ್ತಿ ಸುಮ್ಮನೆ ಗರಗರನೆ ತಿರುಗಿಸಿ ಬಿಟ್ಟನು. ಹೀಗೆ ಶ್ರೀಕೃಷ್ಣನು ಅವನನ್ನು ಆಕಾಶದಲ್ಲಿ ತಿರುಗಿಸುತ್ತಿರುವಂತೆಯೇ ದೈತ್ಯನು ಪ್ರಾಣವನ್ನು ನೀಗಿದನು. ಬಳಿಕ ಅವನನ್ನು ಶ್ರೀಕೃಷ್ಣನು ನೆಲದಮೇಲೆ ಅಪ್ಪಳಿಸಿಬಿಟ್ಟನು. ಹೀಗೆ ನೆಲದಮೇಲೆ ಅಪ್ಪಳಿಸುತ್ತಲೇ ಚಾಣೂರನು ನೂರಾರು ತುಂಡುಗಳಾಗಿ ಹೋದನು. ಆಗ ಅವನ ದೇಹದಿಂದ ಹೊರಹೊರಟ ರಕ್ತದಿಂದ ನೆಲ್ಲವೆಲ್ಲವೂ ಕೆಸರುಕೆಸರಾಗಿ ಹೋಯಿತು. ಆ ಸಮಯದಲ್ಲಿ ಮಹಾಬಲಾಢ್ಯನಾದ ಬಲರಾಮನು ಚಾಣೂರನೊಂದಿಗೆ ಕೃಷ್ಣನು ಹೋರಾಡಿದಂತೆ ಮುಷ್ಟಿಕನೊಡನೆ ಹೋರಾಡಿದನು.

೬೪. ಅನಂತರ ಬಲಭದ್ರನೂ ಸಹ ಮುಷ್ಟಿಕನನ್ನು ತಲೆಯಮೇಲೆ ಮುಷ್ಟಿಯಿಂದಲೂ ಎದೆಯಮೇಲೆ ಮಂಡಿಯಿಂದಲೂ ಬಲವಾಗಿ ಅಪ್ಪಳಿಸಿ ನೆಲದಮೇಲೆ ಕೆಡವಿಬಿಟ್ಟನು. ಬಳಿಕ ಅವನನ್ನು ಚೆನ್ನಾಗಿ ಹಿಸುಕಿಸುಕಿ ಮುದ್ದೆಯಂತೆ ಅವನ ಆಯುಸ್ಸನ್ನು ಕೊನೆಗಾಣಿಸಿಬಿಟ್ಟನು.

೬೫-೬೬. ಆಗ ತೋಶಲಕನೆಂಬ ಮಹಾಬಲಶಾಲಿಯಾದ ಜಟ್ಟಿಯೊಬ್ಬನು ಕೃಷ್ಣನಮೇಲೇರಿ ಬಂದನು. ಆಗ ಕೃಷ್ಣನು ತನ್ನ ಎಡಗೈಯನ್ನು ಮುಷ್ಟಿಕಟ್ಟಿ ಒಂದೇ ಏಟಿನಿಂದ ಅವನನ್ನು ಕೊಂದು ನೆಲಕ್ಕೆ ಕೆಡವಿದನು.

ವಾಮಮುಷ್ಟಿಪ್ರಹಾರೇಣ ಪಾತಯಾಮಾಸ ಭೂತಲೇ ।
ಚಾಣೂರೇ ನಿಹತೇ ಮಲ್ಲೇ ಮುಷ್ಟಿಕೇ ಚ ನಿಪಾತಿತೇ ॥ ೬೭ ॥

ನೀತೇ ಕ್ಷಯಂ ತೋಶಲಕೇ ಸರ್ವೇ ಮಲ್ಲಾಃ ಪ್ರದುದ್ರುವುಃ ।
ವವಲ್ಗತುಸ್ತದಾ ರಂಗೇ ಕೃಷ್ಣಸಂಕರ್ಷಣಾವುಭೌ ॥ ೬೭ ॥

ಸಮಾನವಯಸೋ ಗೋಪಾನ್ಬಲಾದಾಕೃಷ್ಯ ಹರ್ಷಿತೌ ।
ಕಂಸೋಽಪಿ ಕೋಪರಕ್ತಾಕ್ಷಃ ಪ್ರಾಹೋಚ್ಚೈರ್ವ್ಯಾಯತಾನ್ನರಾನ್ ॥ ೬೮ ॥

ಗೋಪಾವೇತೌ ಸಮಾಜೌಘಾನ್ನಿಷ್ಕ್ರಮ್ಯೇತಾಂ ಬಲಾದಿತಃ ।
ನಂದೋಽಪಿ ಗೃಹ್ಯತಾಂ ಪಾಪೋ ನಿಗಡೈರಾಶು ಬಧ್ಯತಾಂ ॥ ೬೯ ॥

ಅವೃದ್ಧಾರ್ಹೇಣ ದಂಡೇನ ವಸುದೇವೋಽಪಿ ವಧ್ಯತಾಂ ।
ವಲ್ಗಂತಿ ಗೋಪಾಃ ಕೃಷ್ಣೇನ ಯೇ ಚೇಮೇ ಸಹಿತಾಃ ಪುನಃ ॥ ೭೦ ॥

---

೬೭. ಹೀಗೆ ಚಾಣೂರನೂ ಮುಷ್ಟಿಕನೂ ತೋಶಲಕನೆಂಬ ಜಟ್ಟಿಯೂ, ಹತರಾದಾಗ ಅವರಕಡೆಯ ಜಟ್ಟಿಗಳೆಲ್ಲರೂ ಭಯದಿಂದ ಓಡಿಹೋದರು. ಆಗ ಕೃಷ್ಣನೂ ಬಲಭದ್ರನೂ ಮಹಾಸಂತೋಷದಿಂದ ತಮ್ಮ ಓರಗೆಯವರಾದ ಗೊಲ್ಲರನ್ನು ಬಲಾತ್ಕಾರದಿಂದ ಎಳೆದುಕೊಂಡು ಅವರೊಡನೆ ಆ ಮಟ್ಟೆಯ ಮೇಲೆ ಓಡಾಡತೊಡಗಿದರು.

೬೮-೭೦. ಅದನ್ನು ನೋಡುತ್ತಲೇ ಕಂಸನಿಗೆ ಕೋಪವುಕ್ಕೇರಿತು. ಕಣ್ಣುಗಳು ಕೆಂಡದಂತೆ ಕೆಂಪೇರಿದುವು. ಆಗ ಅವನು ತನ್ನಕಡೆಯ ಭಾರಿ ಆಳುಗಳನ್ನು ಕರೆದು ಈರೀತಿ ಅಪ್ಪಣೆಮಾಡಿದನು :— ಈ ಗೊಲ್ಲರಿಬ್ಬರನ್ನೂ ಬಲವಂತವಾಗಿ ಈ ಗುಂಪಿನಿಂದ ಹೊರಕ್ಕೆ ತಳ್ಳಿಬಿಡಿರಿ. ಈ ಪಾಪಿಷ್ಠನಾದ ನಂದನನ್ನು ಹಿಡಿಯಿರಿ. ಅವನಿಗೆ ಸಂಕೋಲೆಹಾಕಿ ಬೇಗನೆ ಸೆರೆಯಲ್ಲಿಡಿರಿ. ಮತ್ತು ಆ ವಸುದೇವನನ್ನು, ವೃದ್ಧರಿಗೆ ಎಂದಿಗೂ ಕೊಡಬಾರದಂತಹ ದಂಡನೆಯನ್ನಿತ್ತು, ಬಂಧನದಲ್ಲಿಡಿರಿ. ಅಲ್ಲದೆ ಈಗ ಕೃಷ್ಣನ ಜೊತೆಯಲ್ಲಿ ಸೇರಿ ಯಾವ ಯಾವ ಗೊಲ್ಲರು ಅಹಂಕಾರದಿಂದ ಮೆರೆಯುತ್ತಿರುವರೋ ಆಯಾ ಗೊಲ್ಲರ ಬಳಿಯಿರುವ ಹಸುಗಳೆಲ್ಲವನ್ನೂ ಹೊಡೆದುಕೊಂಡು ಬರುವುದಲ್ಲದೆ, ಅವರಲ್ಲಿ ಸ್ವಲ್ಪ ಹಣವು ಇದ್ದರೂ, ಅದನ್ನೂ ಸಹ ಕಿತ್ತುಕೊಂಡು ಬನ್ನಿರಿ ಎಂದನು.

ಗಾವೋ ಹ್ರಿಯಂತಾಮೇಷಾಂ ಚ ಯಚ್ಚಾಸ್ತಿ ವಸು ಕಿಂಚನ ।
ಏವಮಾಜ್ಞಾಪಯಂತಂ ತಂ ಪ್ರಹಸ್ಯ ಮಧುಸೂದನಃ ॥ ೭೧ ॥

ಉತ್ಪತ್ಯಾರುಹ್ಯ ತನ್ಮಂಚಂ ಕಂಸಂ ಜಗ್ರಾಹ ವೇಗಿತಃ ।
ಕೇಶೇಷ್ವಾಕೃಷ್ಯ ವಿಗಲತ್ಕಿರೀಟಮವನೀತಲೇ ॥ ೭೨ ॥

ಸ ಕಂಸಂ ಪಾತಯಾಮಾಸ ತಸ್ಯೋಪರಿ ಪಪಾತ ಚ ।
ನಿಃಶೇಷಜಗದಾಧಾರಗುರುಣಾ ಪತತೋಪರಿ ॥ ೭೩ ॥

ಕೃಷ್ಣೇನ ತ್ಯಾಜಿತಃ ಪ್ರಾಣಾನ್ನುಗ್ರಸೇನಾತ್ಮಜೋ ನೃಪಃ ।
ಮೃತಸ್ಯ ಕೇಶೇಷು ತದಾ ಗೃಹೀತ್ವಾ ಮಧುಸೂದನಃ ॥ ೭೪ ॥

ಚಕರ್ಷ ದೇಹಂ ಕಂಸಸ್ಯ ರಂಗಮಧ್ಯೇ ಮಹಾಬಲಃ ।
ಗೌರವೇಣಾತಿಮಹತಾ ಪರಿಪಾತೇನ ಕೃಷ್ಯತಾ ॥ ೭೫ ॥

---

೭೧. ಹೀಗೆ ಕಂಸನು ಆಜ್ಞಾಪಿಸುತ್ತಿರುವುದನ್ನು ಕಂಡು ಕೃಷ್ಣನು ಗಟ್ಟಿಯಾಗಿ ನಕ್ಕು ಒಂದೇಬಾರಿಗೆ ಅವನ ಬಳಿ ಹಾರಿಬಂದು, ಅವನು ಕುಳಿತಿದ್ದ ಆಸನವನ್ನು ತಟ್ಟನೆ ಹತ್ತಿ ಸರ್ರನೆ ಆ ಕಂಸನನ್ನು ಹಿಡಿದುಕೊಂಡನು.

೭೨. ಮತ್ತು ಅವನ ಜುಟ್ಟಿಗೆ ಕೈಹಾಕಿ ಕೆಳಕ್ಕೆ ಜಗ್ಗಿದನು. ಆಗ ಕಂಸನ ಕಿರೀಟವು ತಲೆಯಿಂದ ಜಾರಿ ನೆಲಕ್ಕೆ ಬಿದ್ದುದಲ್ಲದೆ ಆ ಕಂಸನೂ ಸಹ ಆ ಆಸನದಿಂದ ಕೆಳಕ್ಕೆ ಉರುಳಿದನು. ಕೃಷ್ಣನು ಅವನಮೇಲೆ ಬಿದ್ದನು.

೭೩-೭೪. ಸಕಲವಾದ ಜಗತ್ತೂ ಯಾವನಲ್ಲಿ ಅಡಕವಾಗಿದೆಯೋ ಅಂತಹ ಮಹಾಪುರುಷನಾದ ಕೃಷ್ಣನು ಮೇಲೆ ಬೀಳುತ್ತಲೇ ಆ ಹೊರೆಯನ್ನು ತಾಳ ಲಾರದೆ ಕಂಸನು ತನ್ನ ಪ್ರಾಣವನ್ನು ನೀಗಿದನು.

೭೫. ಆಗ ಮಹಾಬಲಾಢ್ಯನಾದ ಕೃಷ್ಣನು ಸತ್ತುಬಿದ್ದಿದ್ದ ಕಂಸನ ಕೂದಲಿಗೆ ಕೈಹಾಕಿ ಹಿಡಿದು ಆ ದೇಹವನ್ನು ಆ ರಂಗಸ್ಥಳದಲ್ಲೆಲ್ಲಾ ಎಳೆದಾಡಿದನು. ಹೀಗೆ ಮಹಾಭಾರವುಳ್ಳ ಮಹಾತ್ಮನಾದ ಕೃಷ್ಣನು ಮಹಾವೇಗದಿಂದ ಮೇಲೆ ಬಿದ್ದುದರಿಂದಲೂ, ರಂಗಸ್ಥಳದಲ್ಲಿ ಸಿಕ್ಕಿದಂತೆ ಎಳೆದಾಡಿದುದರಿಂದಲೂ ಆ ಕಂಸನ ದೇಹವು ಕಿತ್ತುಕಿತ್ತುಹೋಯಿತು.

ಕೃತಾ ಕಂಸಸ್ಯ ದೇಹೇನ ವೇಗಿತೇನ ಮಹಾತ್ಮನಾ ।
ಕಂಸೇ ಗೃಹೀತೇ ಕೃಷ್ಣೇನ ತದ್ಭ್ರಾತಾಭ್ಯಾಗತೋ ರುಷಾ ॥ ೭೬ ॥

ಸುನಾಮಾ ಬಲಭದ್ರೇಣ ಲೀಲಯೈವ ನಿಪಾತಿತಃ ।
ತತೋ ಹಾಹಾಕೃತಂ ಸರ್ವಮಾಸೀತ್ತದ್ರಂಗಮಂಡಲಂ ॥ ೭೭ ॥

ಅವಜ್ಞಯಾ ಹತಂ ದೃಷ್ಟ್ವಾ ಕೃಷ್ಣೇನ ಮಥುರೇಶ್ವರಂ ।
ಕೃಷ್ಣೋಽಪಿ ವಸುದೇವಸ್ಯ ಪಾದೌ ಜಗ್ರಾಹ ಸತ್ವರಂ ॥ ೭೮ ॥

ದೇವಕ್ಯಾಶ್ಚ ಮಹಾಬಾಹುರ್ಬಲದೇವಸಹಾಯವಾನ್ ।
ಉತ್ಥಾಪ್ಯ ವಸುದೇವಸ್ತು ದೇವಕೀ ಚ ಜನಾರ್ದನಂ ।
ಸ್ಮೃತಜನ್ಮೋಕ್ತವಚನೌ ತಾವೇವ ಪ್ರಣತೌ ಸ್ಥಿತೌ ॥ ೭೯ ॥

---

೭೬. ಆಗ ಸುನಾಮನೆಂಬ ಕಂಸನ ತಮ್ಮನು ಕೃಷ್ಣನಿಂದ ತನ್ನ ಅಣ್ಣನು ಹತನಾದುದನ್ನು ಕಂಡು ಕೋಪದಿಂದ ಸೆಣಸಲು ಬಂದನು. ಆಗ ಬಲಭದ್ರನು ಆ ದುಷ್ಟನನ್ನು ಲೀಲೆಯಿಂದಲೇ ಕೊಂದು ಕೆಡಹಿಬಿಟ್ಟನು.

೭೭. ಬಳಿಕ ಆ ರಂಗಮಂಟಪದಲ್ಲಿ ನೆರೆದಿದ್ದ ಜನರೆಲ್ಲರೂ, ಹೀಗೆ ಸ್ವಲ್ಪವೂ ಲಕ್ಷ್ಯವಿಲ್ಲದೆ ಲೀಲಾಮಾತ್ರದಿಂದಲೇ ಕಂಸನನ್ನು ಶ್ರೀಕೃಷ್ಣನು ಸಂಹರಿಸಿದುದನ್ನು ಕಂಡು ಹಾಹಾಕಾರವನ್ನು ಮಾಡಿದರು.

೭೮. ಇತ್ತ ಕೃಷ್ಣನು ತನ್ನ ಅಣ್ಣನಾದ ಬಲರಾಮನೊಡನೆ ವಸುದೇವನೂ ದೇವಕಿಯೂ ಇದ್ದಲ್ಲಿಗೆ ಬೇಗನೆ ಬಂದು ಅವರೀರ್ವರಿಗೂ ಕಾಲುಗಳನ್ನು ಮುಟ್ಟಿ ನಮಸ್ಕಾರಮಾಡಿದನು.

೭೯. ಆಗ ವಸುದೇವನೂ ದೇವಕಿಯೂ ತಮಗೆ ನಮಸ್ಕಾರ ಮಾಡಿದ ಆ ಶ್ರೀಕೃಷ್ಣನನ್ನು ಎತ್ತಿಹಿಡಿದು ಮೇಲಕ್ಕೆಬ್ಬಿಸಿ, ಆ ಪರಮಾತ್ಮನು ಅವತರಿಸಿದಾಗ ಹೇಳಿದ್ದ ಮಾತುಗಳನ್ನು ನೆನೆದು, ಅವನಿಗೆ ನಮಸ್ಕಾರಮಾಡಿ ಈರೀತಿ ಸ್ತೋತ್ರಮಾಡಿದರು.

॥ ವಸುದೇವ ಉವಾಚ ॥

ಪ್ರಸೀದ ದೇವದೇವೇಶ ದೇವಾನಾಂ ಪ್ರವರ ಪ್ರಭೋ ।
ಆವಯೋಃ ಪ್ರಸಾದೇನ ಕೃತಾಭ್ಯುದ್ಧಾರ ಕೇಶವ ॥ ೮೦ ॥

ಆರಾಧಿತೋ ಯದ್ಭಗವಾನವತೀರ್ಣೋ ಗೃಹೇ ಮಮ ।
ದುರ್ವೃತ್ತನಿಧನಾರ್ಥಾಯ ತೇನ ನಃ ಪಾವಿತಂ ಕುಲಂ ॥ ೮೧ ॥

ತ್ವಮಂತಃ ಸರ್ವಭೂತಾನಾಂ ಸರ್ವಭೂತೇಷ್ವವಸ್ಥಿತಃ ।
ವರ್ತತೇ ಚ ಸಮುಸ್ತಾತ್ಮಂಸ್ತ್ವತ್ತೋ ಭೂತಭವಿಷ್ಯತೀ ॥ ೮೨ ॥

ಯಜ್ಞೇ ತ್ವಮಿಜ್ಯಸೇಽಚಿಂತ್ಯ ಸರ್ವದೇವಮಯಾಚ್ಯುತ ।
ತ್ವಮೇವ ಯಜ್ಞೋ ಯಜ್ವಾ ಚ ಯಜ್ಞಾನಾಂ ಪರಮೇಶ್ವರ ॥ ೮೩ ॥

---

೮೦. ಎಲೈ ದೇವದೇವನೇ! ಪ್ರಸನ್ನನಾಗು. ದೇವತೆಗಳಲ್ಲೆಲ್ಲಾ ಶ್ರೇಷ್ಠನೆನಿಸಿದ ಎಲೈ ಪ್ರಭುವೇ! ನಮ್ಮಲ್ಲಿ ಪ್ರಸಾದವನ್ನು ತೋರುವವನಾಗು. ನಮ್ಮಮೇಲೆ ಕೃಪೆಯಿಟ್ಟು ಕಷ್ಟದಿಂದ ಉದ್ಧಾರಮಾಡಿದ ಎಲೈ ಕೇಶವನೇ, ನಮ್ಮಲ್ಲಿ ಪ್ರಸನ್ನತೆಯನ್ನು ತೋರು.

೮೧. ಹೇ, ಭಗವನ್, ನಾನು ಮಾಡಿದ ಆರಾಧನೆಯನ್ನು ಕೈಕೊಂಡು, ದುಷ್ಟರನ್ನು ಸಂಹರಿಸುವ ಸಲುವಾಗಿ ನನ್ನ ಮನೆಯಲ್ಲಿಯೇ ನೀನು ಅವತರಿಸಿದೆಯಲ್ಲವೇ. ಇದರಿಂದ ನಮ್ಮ ವಂಶವೇ ಪಾವನಗೊಳಿಸಲ್ಪಟ್ಟಿತು.

೮೨. ನೀನು ಎಲ್ಲ ಪ್ರಾಣಿಗಳ ಅಂತಃಕರಣರೂಪವಾಗಿರುವೆ. ಮತ್ತು ಎಲ್ಲ ಭೂತಗಳಲ್ಲಿ ನೆಲೆಸಿಯೂ ಇರುವೆ. ಎಲೈ ಸಕಲಜೀವಸ್ವರೂಪನೇ, ನೀನೇ ವರ್ತಮಾನವು, ನೀನೇ ಭೂತಕ್ಕೂ ಭವಿಷ್ಯತ್ತಿಗೂ ಕಾರಣನಾಗಿರುವೆ.

೮೩. ನಿನ್ನನ್ನು ಹೀಗೆಂದು ಊಹಿಸಲೂ ಸಹ ಯಾರಿಗೂ ಸಾಧ್ಯವಿಲ್ಲ ಯಜ್ಞಗಳಲ್ಲಿ ಎಲ್ಲರೂ ನಿನ್ನನ್ನೇ ಆರಾಧಿಸುವರು. ಎಲೈ ಅಚ್ಯುತನೇ (ನಾಶವಿಲ್ಲದವನೇ) ನೀನೇ ಸಕಲದೇವಸ್ವರೂಪನು. ನೀನೇ ಯಜ್ಞವು. ಯಜ್ಞವನ್ನು ಮಾಡುವ ಯಜಮಾನನೂ ನೀನೇ. ಮತ್ತು ಆ ಯಜ್ಞಗಳಿಗೆ ಅಧಿಪತಿಯಾದವನೂ ನೀನೇ.

ಸಾಪಕ್ಷ್ನವಂ ಮಮ ಮಗ್ನೋ ಯಃ ದೇಶತ್ತ್ವಯಿ ಜಾಯತೇ ।
ದೇವಕ್ಯಾಶ್ಚಾತ್ಮಜ ಪ್ರೀತ್ಯಾ ತದತ್ಯಂತವಿಡಂಬನಾ ॥ ೮೪ ॥

ತ್ವಂ ಕರ್ತಾ ಸರ್ವಭೂತಾನಾಮನಾದಿನಿಧನೋ ಭವಾನ್ ।
ಕ್ವ ಚ ಮೇ ಮಾನುಷಸ್ಯೈಷಾ ಜಿಹ್ವಾ ಪುತ್ರೇತಿ ವಕ್ಷ್ಯತಿ ॥ ೮೫ ॥

ಜಗದೇತಜ್ಜಗನ್ನಾಥ ಸಂಭೂತಮಖಿಲಂ ಯತಃ ।
ಕಯಾ ಯುಕ್ತ್ಯಾ ವಿನಾ ಮಾಯಾಂ ಸೋಽಸ್ಮತ್ತಃ ಸಂಭವಿಷ್ಯತಿ ॥ ೮೬ ॥

ಯಸ್ಮಿನ್ಪ್ರತಿಷ್ಠಿತಂ ಸರ್ವಂ ಜಗತ್ಸ್ಥಾವರಜಂಗಮಂ ।
ಸ ಕೋಷ್ಠೋತ್ಸಂಗಶಯನೋ ಮನುಷ್ಯಾಜ್ಜಾಯತೇ ಕಥಂ ॥ ೮೭ ॥

---

೮೪. ಇಂತಹ ನಿನ್ನ ವಿಷಯದಲ್ಲಿ ನಾನೂ ಮತ್ತು ದೇವಕಿಯೂ ನಮ್ಮ ಮಗನೆಂಬ ವಾತ್ಸಲ್ಯದಿಂದ, ಕೃತ್ರಿಮವಾದ ಪುತ್ರಭಾವನೆಯನ್ನು ನಮ್ಮ ಮನಸ್ಸಿನಲ್ಲಿ ವಹಿಸುತ್ತಿದ್ದೆವಲ್ಲಾ! ಇದು ಬಹು ಹಾಸ್ಯಾಸ್ಪದವಾದುದಲ್ಲವೇ?

೮೫. ನೀನೇ ಎಲ್ಲ ಭೂತಗಳಿಗೂ (ಪ್ರಾಣಿಗಳಿಗೂ) ಕರ್ತೃವಾಗಿರುವೆ. ನಿನಗೆ ಹುಟ್ಟು ಸಾವು ಒಂದೂ ಇಲ್ಲ. ಇಂತಹ ನಿನ್ನನ್ನು ಸಾಮಾನ್ಯ ಮನುಷ್ಯನಾದ ನಾನು ಹೇಗೆತಾನೇ ಈ ನಾಲಿಗೆಯಿಂದ 'ಮಗನೇ' ಎಂಬುದಾಗಿ ಕರೆಯಲಿ?

೮೬. ಎಲೈ ಜಗನ್ನಾಥನೇ, ಯಾವನಿಂದ ಸಮಸ್ತವಾದ ಈ ಪ್ರಪಂಚವೆಲ್ಲವೂ ಸೃಷ್ಟಿಮಾಡಲ್ಪಟ್ಟಿತೋ, ಅಂತಹ ಪರಮಪುರುಷನಾದ ನೀನು, ನಮ್ಮ ಹೊಟ್ಟೆಯಲ್ಲಿ ಹುಟ್ಟಿದೆಯೆಂದು ಹೇಳಲು ಮಾಯೆಯೊಂದನ್ನು ಬಿಟ್ಟು ಮತ್ತಾವ ರೀತಿಯಿಂದ ತಾನೇ ಸಾಧ್ಯವಾದೀತು? ಹಾಗೆ ನಿನ್ನನ್ನು ಮಗನೆಂದು ಭಾವಿಸುವುದು ನಿನ್ನ ಮಾಯೆಯ ಪ್ರಭಾವದಿಂದಲೇ ಅಲ್ಲದೆ ಮತ್ತೆ ಬೇರೆ ಅಲ್ಲ.

೮೭. ಚರಾಚರಾತ್ಮಕವಾದ ಈ ಪ್ರಪಂಚವೆಲ್ಲವೂ ಯಾವನಲ್ಲಿಯೇ ನೆಲೆಸಿರುವುದೋ, ಯಾವನು ಶೇಷತಲ್ಪದಮೇಲೆ ಮಲಗಿರುವನೋ ಆ ಮಹಾ ಮಹಿಮನು ಮನುಷ್ಯಮಾತ್ರನಿಗೆ ಮಗನಾಗಿ ಹುಟ್ಟುವುದಾದರೂ ಹೇಗೆ?

ಸ ತ್ವಂ ಪ್ರಸೀದ ಪರಮೇಶ್ವರ ಪಾಹಿ ವಿಶ್ವ-
ಮಂಶಾವತಾರಕರಣೈರ್ನ ಮಮಾಸಿ ಪುತ್ರಃ ।
ಆಬ್ರಹ್ಮಪಾದಪಮಯಂ ಜಗದೀಶ ಸರ್ವಂ
ಚಿತ್ತೇ ವಿಮೋಹಯಸಿ ಕಿಂ ಪರಮೇಶ್ವರಾತ್ಮನ್ ॥ ೮೮ ॥

ಮಾಯಾವಿಮೋಹಿತದೃಶಾ ತನಯೋ ಮಮೇತಿ
ಕಂಸಾದ್ಭಯಂ ಕೃತವತಾ ತು ಮಯಾತಿತೀವ್ರಂ ।
ನೀತೋಽಸಿ ಗೋಕುಲಮರಾತಿಭಯಾಕುಲಸ್ಯ
ವೃದ್ಧಿಂ ಗತೋಽಸಿ ಮಮ ಚೈವ ಗವಾಮಧೀಶ ॥ ೮೯ ॥

ಕರ್ಮಾಣಿ ರುದ್ರಮರುದಶ್ವಿಶತಕ್ರತೂನಾಂ
ಸಾಧ್ಯಾನಿ ಯಾನಿ ನ ಭವಂತಿ ನಿರೀಕ್ಷಿತಾನಿ ।

---

೮೮. ಹೇ ಪರಮೇಶ್ವರ! ಇಂತಹ ಮಹಾ ವೈಭವಶಾಲಿಯಾದ ನೀನು ನನ್ನಲ್ಲಿ ಪ್ರಸನ್ನನಾಗು. ಇದೇರೀತಿ ಅಂಶಾವತಾರಗಳನ್ನು ಎತ್ತುವುದರಿಂದ ಈ ಪ್ರಪಂಚವನ್ನು ಕಾಪಾಡು. ನೀನು ನನ್ನ ಮಗನಲ್ಲ. ಎಲೈ ಜಗದೀಶನೇ! ಬ್ರಹ್ಮನಿಂದ ಹಿಡಿದು ಮರಗಳವರೆಗೂ ಇರುವ ಸಕಲ ಪ್ರಪಂಚವೂ ನೀನೇ ಆಗಿರುವೆ. ಓ ಪರಮಪುರುಷ, ಏತಕ್ಕೆ ನಮ್ಮ ಮನಸ್ಸಿನಲ್ಲಿ ಹೀಗೆ ಭ್ರಾಂತಿಯನ್ನು (ಮೋಹವನ್ನು) ಉಂಟುಮಾಡುವೆ ?

೮೯. ಎಲೈ ಸ್ವಾಮಿಯೇ, ನೀನು ಗೋವುಗಳಿಗೆ ಮಾತ್ರವಲ್ಲ. ಶತ್ರುಭಯಪೀಡಿತನಾದ ನನಗೂ ಸ್ವಾಮಿಯಾಗಿರುವೆ. ನಿನ್ನನ್ನು ನಾನು ಮಾಯೆಯಿಂದ ಮೋಹಿತನಾಗಿ, ಮತಿಗೆಟ್ಟು, ಮಗನೆಂಬುದಾಗಿ ಭಾವಿಸಿದುದಲ್ಲದೆ, ಕಂಸನಿಗೆ ಹೆದರಿಕೊಂಡು, ಬಹುಬೇಗನೆ ಗೋಕುಲಕ್ಕೂ ತೆಗೆದುಕೊಂಡು ಹೋದೆನು. ಅಲ್ಲಿ ನೀನು ಮುಂದಕ್ಕೆ ಬೆಳೆದೆ.

೯೦. ಎಲೈ ಜಗದೀಶನೇ, ಯಾವ ಕೆಲಸಗಳನ್ನು ಮಾಡಲು, ರುದ್ರರಿಂದಲೂ, ಮರುತ್ತುಗಳಿಂದಲೂ, ಅಶ್ವಿನೀದೇವತೆಗಳಿಂದಲೂ, ಇಂದ್ರನಿಂದಲೂ

ತ್ವಂ ವಿಷ್ಣುರೀಶಜಗತಾಮುಪಕಾರಹೇತೋಃ
ಪ್ರಾಪ್ತೋಽಸಿ ನಃ ಪರಿಗತಃ ಪರಮೋ ವಿಮೋಹಃ ॥ ೯೦ ॥

ಇತಿ ಶ್ರೀಮಹಾಪುರಾಣೇ ಆದಿಬ್ರಾಹ್ಮೇ ಬಾಲಚರಿತೇ ಕಂಸವಧಕಥನಂ
ನಾಮ ತ್ರಿನವತ್ಯಧಿಕಶತತಮೋಽಧ್ಯಾಯಃ

---

ಸಾಧ್ಯವಿಲ್ಲವೋ ಆ ಕೆಲಸಗಳನ್ನು ಸರ್ವವ್ಯಾಪಿಯಾದ ವಿಷ್ಣುವೆನಿಸಿರುವ ನೀನು, ಜಗತ್ತಿಗೆ ಉಪಕಾರಮಾಡುವ ಸಲುವಾಗಿ ಮಾಡಿಬಿಟ್ಟಿರುವೆ. ನಮಗೆ ಕವಿದಿದ್ದ ಮಹಾಮೋಹವು (ಭಾರಿ ಅಜ್ಞಾನವು) ಇಂದಿಗೆ ನಿವೃತ್ತವಾಯಿತು. ಎಂದು ಸ್ತುತಿಸಿದರು.

ಇಲ್ಲಿಗೆ ಶ್ರೀಬ್ರಹ್ಮಪುರಾಣದಲ್ಲಿ ಕೃಷ್ಣಬಾಲಚರಿತ್ರೆಯಲ್ಲಿ ಕಂಸವಧ ಕಥನವೆಂಬ
ನೂರತೊಂಭತ್ತಮೂರನೆಯ ಅಧ್ಯಾಯವು ಮುಗಿದುದು.



ಶ್ರೀಃ

ಓಂ ತತ್ಸದ್ಬ್ರಹ್ಮಣೇ ನಮಃ

# ಅಥ ಬ್ರಾಹ್ಮೇ ಮಹಾಪುರಾಣೇ

# ಚತುರ್ನವತ್ಯಧಿಕಶತತಮೋಽಧ್ಯಾಯಃ

॥ ವ್ಯಾಸ ಉವಾಚ ॥

ತೌ ಸಮುತ್ಪನ್ನವಿಜ್ಞಾನೌ ಭಗವತ್ಕರ್ಮದರ್ಶನಾತ್ ।
ದೇವಕೀವಸುದೇವೌ ತು ದೃಷ್ಟ್ವಾ ಮಾಯಾಂ ಪುನರ್ಹರಿಃ ॥ ೧ ॥

ಮೋಹಾಯ ಯದುಚಕ್ರಸ್ಯ ವಿತತಾನ ಸ ವೈಷ್ಣವೀಂ ।
ಉವಾಚ ಚಾಂಬ ಭೋಸ್ತಾತ ಚಿರಾದುತ್ಕಂಠಿತೇನ ತು ॥ ೨ ॥

ಭವಂತೌ ಕಂಸಭೀತೇನ ದೃಷ್ಟೌ ಸಂಕರ್ಷಣೇನ ಚ ।
ಕುರ್ವತಾಂ ಯಾತಿ ಯಃ ಕಾಲೋ ಮಾತಾಪಿತ್ರೋರಪೂಜನಂ ॥ ೩ ॥

## ನೂರತೊಂಭತ್ತನಾಲ್ಕನೆಯ ಅಧ್ಯಾಯವು

೧–೫. ವ್ಯಾಸನು ಹೇಳತೊಡಗಿದನು ;—ಈರೀತಿಯಾಗಿ ತನ್ನ ಅದ್ಭುತವಾದ ಕಾರ್ಯಗಳನ್ನು ಕಂಡು ನಿರ್ಮಲವಾದ ಜ್ಞಾನವುಂಟಾಗಿ ಸ್ತುತಿಸುತ್ತಿರುವ ಆ ದೇವಕೀ ವಸುದೇವರನ್ನು ಕಂಡು ಶ್ರೀಕೃಷ್ಣನು ಆ ಯಾದವರೆಲ್ಲರಿಗೂ ಮರಳಿ ಅಜ್ಞಾನವು ಕವಿಯುವಂತೆ ತನ್ನ ವಿಷ್ಣುಮಾಯೆಯನ್ನು ಬೀಸಿದನು. ಬಳಿಕ ತನ್ನ ತಂದೆತಾಯಿಯರನ್ನು ಕುರಿತು, "ಎಲೌ ಜನನೀಜನಕರೇ, ಕಂಸನಿಗೆ ಹೆದರಿಕೊಂಡ ನಾನೂ ಮತ್ತು ಈ ಬಲಭದ್ರನೂ, ಬಹುದಿನಗಳಿಂದಲೂ ನಿಮ್ಮನ್ನು ನೋಡಲು ಹಾತೊರೆಯುತ್ತಿದ್ದೆವು. ಇಂದು ನೋಡಿದೆವು. ಯಾರು ತಮ್ಮ ಮಾತಾಪಿತೃಗಳನ್ನು ಸೇವಿಸದೆ ವ್ಯರ್ಥವಾಗಿ ಒದಗಿದ್ದ ಸಮಯವನ್ನು

ಸ ವೃಥಾ ಕ್ಲೇಶಕಾರೀ ವೈ ಸಾಧೂನಾಮುಪಜಾಯತೇ ।
ಗುರುದೇವದ್ವಿಜಾತೀನಾಂ ಮಾತಾಪಿತ್ರೋಶ್ಚ ಪೂಜನಂ ॥ ೪ ॥

ಕುರ್ವತಃ ಸಫಲಂ ಜನ್ಮ ದೇಹಿನಸ್ತಾತ ಜಾಯತೇ ।
ತತ್ಕ್ಷಂತವ್ಯಮಿದಂ ಸರ್ವಮತಿಕ್ರಮಕೃತಂ ಪಿತಃ ।
ಕಂಸವೀರ್ಯಪ್ರತಾಪಾಭ್ಯಾಮಾವಯೋಃ ಪರವಶ್ಯಯೋಃ ॥ ೫ ॥

॥ ವ್ಯಾಸ ಉವಾಚ ॥

ಇತ್ಯುಕ್ತ್ವಾಥ ಪ್ರಣಮ್ಯೋಭೌ ಯದುವೃದ್ಧಾನನುಕ್ರಮಾತ್ ।
ಪಾದಾನತಿಭಿಃ ಸಸ್ನೇಹಂ ಚಕ್ರತುಃ ಪೌರಮಾನಸಂ ॥ ೬ ॥

ಕಂಸಪತ್ನ್ಯಸ್ತತಃ ಕಂಸಂ ಪರಿವಾರ್ಯ ಹತಂ ಭುವಿ ।
ವಿಲೇಪುರ್ಮಾತರಶ್ಚಾಸ್ಯ ಶೋಕದುಃಖಪರಿಪ್ಲುತಾಃ ॥ ೭ ॥

---

ಕಳೆಮುಕೊಳ್ಳುವರೋ ಅವರು ನಿಜವಾಗಿಯೂ ಸಾಧುಗಳೇ (ಒಳ್ಳೆಯವರೇ) ಆಗಿದ್ದಲ್ಲಿ, ಆ ಕಾಲವೆಲ್ಲವನ್ನೂ ದುಃಖದಿಂದಲೇ ಕಳೆದಿರುವರು. ಓ ಜನಕ, ಮನುಷ್ಯನಾದವನು ಗುರುಗಳಿಗೂ, ದೇವಬ್ರಾಹ್ಮಣರಿಗೂ, ಮಾತಾಪಿತೃಗಳಿಗೂ, ಶುಶ್ರೂಷೆಯನ್ನು ಮಾಡಲೇಬೇಕು. ಹಾಗಾದಲ್ಲಿ ಅವನ ಜನ್ಮವು ಸಾರ್ಥಕವಾಗುವುದು. ಆದುದರಿಂದ ಎಲೈ ತಂದೆಯೇ, ಕಂಸನ ಶೌರ್ಯಕ್ಕೂ ಪ್ರತಾಪಕ್ಕೂ ಹೆದರಿ ವಶೀಭೂತರಾಗಿದ್ದ ನಾವಿಬ್ಬರೂ ಇದುವರೆಗೆ ನಿಮ್ಮೀರ್ವರನ್ನೂ ನೋಡದಿದ್ದುದರಿಂದ ಉಂಟಾದ ಅಪರಾಧವೆಲ್ಲವನ್ನೂ ಕ್ಷಮಿಸಬೇಕು.'' ಎಂದು ಪ್ರಾರ್ಥಿಸಿದನು.

೬. ಎಲೈ ಬ್ರಾಹ್ಮಣೋತ್ತಮರೇ ಈರೀತಿಯಾಗಿ ಆ ಕೃಷ್ಣನು ಹೇಳಿದ ಬಳಿಕ ಅವರೀರ್ವರೂ, ಜನನೀಜನಕರಿಗೆ ನಮಸ್ಕಾರ ಮಾಡಿದರು. ಅನಂತರ ಯದುಗಳಲ್ಲಿ ಹಿರಿಯರಾದವರಿಗೆಲ್ಲರಿಗೂ ಸಹ ನಮಸ್ಕರಿಸಿ ಆ ಪಟ್ಟಣಿಗರ ಪ್ರೀತಿಗೆ ಪಾತ್ರರಾದರು.

೭. ಬಳಿಕ ಯುದ್ಧದಲ್ಲಿ ಹತನಾಗಿ ಬಿದ್ದಿದ್ದ ಆ ಕಂಸನನ್ನು ಸುತ್ತುವರಿದುಕೊಂಡು ಅವನ ಪತ್ನಿಯರೂ ತಾಯಿಯರೂ, ಶೋಕದಿಂದ ತುಂಬಿದ ಹೃದಯವುಳ್ಳವರಾಗಿ ಗಟ್ಟಿಯಾಗಿ ಗೋಳಾಡತೊಡಗಿದರು.

ಬಹುಪ್ರಕಾರಮುಸ್ವಸ್ಥಾಃ ಪಶ್ಚಾತ್ತಾಪಾತುರಾ ಹರಿಃ ।
ತಾಃ ಸಮಾಶ್ವಾಸಯಾಮಾಸ ಸ್ವಯಮುಸ್ರಾವಿಲೇಕ್ಷಣಃ ॥ ೮ ॥

ಉಗ್ರಸೇನಂ ತತೋ ಬಂಧಾನ್ಮುಮೋಚ ಮಧುಸೂದನಃ ।
ಅಭ್ಯಷಿಂಚತ್ತಥೈವೈನಂ ನಿಜರಾಜ್ಯೇ ಹತಾತ್ಮಜಂ ॥ ೯ ॥

ರಾಜ್ಯೇಽಭಿಷಿಕ್ತಃ ಕೃಷ್ಣೇನ ಯದುಸಿಂಹಃ ಸುತಸ್ಯ ಸಃ ।
ಚಕಾರ ಪ್ರೇತಕಾರ್ಯಾಣಿ ಯೇ ಚಾನ್ಯೇ ತತ್ರ ಘಾತಿತಾಃ ॥ ೧೦ ॥

ಕೃತೌರ್ಧ್ವದೈಹಿಕಂ ಚೈನಂ ಸಿಂಹಾಸನಗತಂ ಹರಿಃ ।
ಉವಾಚಾಜ್ಞಾಪಯ ವಿಭೋ ಯತ್ಕಾರ್ಯಮವಿಶಂಕಯಾ ॥ ೧೧ ॥

ಯಯಾತಿಶಾಪಾದ್ವಂಶೋಽಯಮರಾಜ್ಯಾರ್ಹೋಽಪಿ ಸಾಂಪ್ರತಂ ।
ಮಯಿ ಭೃತ್ಯೇ ಸ್ಥಿತೇ ದೇವಾನಾಜ್ಞಾಪಯತು ಕಿಂ ನೃಪೈಃ ॥ ೧೨ ॥

---

೮. ಆಗ ಶ್ರೀಕೃಷ್ಣನೂ ಸಹ ದುಃಖದಿಂದ ಕಣ್ಣೀರು ತುಂಬಿದವನಾಗಿ, ಪರಿತಾಪಾತಿಶಯದಿಂದ ಬಗೆಬಗೆಯಾಗಿ ದುಃಖಿಸುತ್ತಿರುವ ಆ ಸ್ತ್ರೀಯರನ್ನು ಸಮಾಧಾನಪಡಿಸಿದನು.

೯. ಬಳಿಕ ಆ ಮಧುಸೂದನನು ಸೆರೆಯಲ್ಲಿಟ್ಟಿದ್ದ ಉಗ್ರಸೇನನ ಬಳಿಗೆ ಹೋಗಿ ಅವನನ್ನು ಆ ಸೆರೆಯಿಂದ ಬಿಡಿಸಿದುದಲ್ಲದೆ ಮಗನನ್ನು ಕಳೆದುಕೊಂಡ ಆತನನ್ನು ಮತ್ತೆ ತನ್ನ ರಾಜ್ಯದಲ್ಲಿ ಅಭಿಷೇಕಮಾಡಿದನು.

೧೦. ಈರೀತಿಯಾಗಿ ಶ್ರೀಕೃಷ್ಣನಿಂದ ರಾಜ್ಯದಲ್ಲಿ ಅಭಿಷಿಕ್ತನಾದ ಯದುರಾಜನಾದ ಆ ಉಗ್ರಸೇನನು ತನ್ನ ಮಗನಿಗೂ ಮತ್ತು ಇನ್ನೂ ಯಾರು ಯಾರು ಯುದ್ಧರಂಗದಲ್ಲಿ ನಿಹತರಾದರೋ ಆ ಯಾದವರಿಗೆಲ್ಲರಿಗೂ ಔರ್ಧ್ವ ದೈಹಿಕ ಕೃತ್ಯಗಳನ್ನು ನಡೆಸಿದನು.

೧೧-೧೩. ಆ ಕೃತ್ಯಗಳೆಲ್ಲವೂ ಮುಗಿದಮೇಲೆ, ಒಂದುದಿನ ಉಗ್ರ ಸೇನನು ಸಿಂಹಾಸನದಲ್ಲಿ ಕುಳಿತಿದ್ದಾಗ, ದೇವಕಾರ್ಯಾರ್ಥವಾಗಿ ಮನಷ್ಯ ಲೀಲೆಯನ್ನು ತೋರುತ್ತಿರುವ ಆ ಭಗವಂತನಾದ ಕೃಷ್ಣನು ಆತನನ್ನು ಕುರಿತು "ಎಲೈ ಪ್ರಭುವೇ, ಯಾವ ಕೆಲಸವಿದ್ದರೂ, ಏನೊಂದೂ ಅಡ್ಡಿಯಿಲ್ಲದೆ ನನ್ನನ್ನು ಆಜ್ಞಾಪಿಸುವವನಾಗು. ನಮ್ಮೀವಂಶವು ಯಯಾತಿಯ ಶಾಪದಿಂದ

ಇತ್ಯುಕ್ತ್ವಾ ಚೋಗ್ರಸೇನಂ ತು ವಾಯುಂ ಪ್ರತಿ ಜಗಾದ ಹ ।
ಸ್ವನಾಚಾ ಚೈವ ಭಗವಾನ್ಕೇಶವಃ ಕಾರ್ಯಮಾನುಷಃ ॥ ೧೩ ॥

॥ ಶ್ರೀಕೃಷ್ಣ ಉವಾಚ ॥

ಗಚ್ಛೇಂದ್ರಂ ಬ್ರೂಹಿ ವಾಯೋ ತ್ವಮಲಂ ಗರ್ವೇಣ ವಾಸವ ।
ದೀಯತಾಮುಗ್ರಸೇನಾಯ ಸುಧರ್ಮಾ ಭವತಾ ಸಭಾ ॥ ೧೪ ॥

ಕೃಷ್ಣೋ ಬ್ರವೀತಿ ರಾಜಾರ್ಹಮೇತದ್ರತ್ನಮನುತ್ತಮಂ ।
ಸುಧರ್ಮಾಖ್ಯಾ ಸಭಾ ಯುಕ್ತಮಸ್ಯಾಂ ಯದುಭಿರಾಸಿತುಂ ॥ ೧೫ ॥

॥ ವ್ಯಾಸ ಉವಾಚ ॥

ಇತ್ಯುಕ್ತಃ ಪವನೋ ಗತ್ವಾ ಸರ್ವಮಾಹ ಶಚೀಪತಿಂ ।
ದದೌ ಸೋಽಪಿ ಸುಧರ್ಮಾಖ್ಯಾಂ ಸಭಾಂ ವಾಯೋಃ ಪುರಂದರಃ ॥ ೧೬ ॥

---

ರಾಜ್ಯಕ್ಕೆ ಅನರ್ಹವಾದುದೇನೋ ನಿಜವು. ಆದರೂ ನಾನೀಗ ಸೇವಕನಾಗಿರುವುದರಿಂದ ದೇವತೆಗಳಮೇಲೆಯೂ ಸಹ ನಿನ್ನ ಆಜ್ಞೆಯನ್ನು ನಡೆಸಬಹುದು. ಇನ್ನೀಸಾಮಾನ್ಯರಾದ ಅರಸರ ಮಾತೇಕೆ? ಎಂದು ನುಡಿದು ವಾಯುವನ್ನು ಕರೆದು ಮನುಷ್ಯವಾಣಿಯಿಂದ ಈರೀತಿ ಆಜ್ಞಾಪಿಸಿದನು.

೧೪-೧೫. ಎಲೈ ವಾಯುವೇ, ನೀನೀಗ ಇಂದ್ರನ ಬಳಿಗೆ ಹೋಗಿ ನಾನು ಹೇಳಿದೆನೆಂದು ತಿಳಿಸು :—"ಎಲೈ ಇಂದ್ರನೇ ನಿನ್ನ ಗರ್ವವನ್ನು ಸಾಕುಮಾಡು. ನೀನು ಓಲೈಸುವ ಸುಧರ್ಮಾ ಎಂಬ ದೇವಸಭೆಯನ್ನು ಉಗ್ರಸೇನನಿಗೆ ಕಳುಹಿಸಿಕೊಡು. ಮಹಾಶ್ರೇಷ್ಠವಾದ ಈ ಸುಧರ್ಮೆಯೆಂಬ ಸಭಾರತ್ನವು ರಾಜರು ಮಂಡಿಸಲು ಅರ್ಹವಾದುದು. ಆದುದರಿಂದ ಈ ಸಭೆಯಲ್ಲಿ (ಸಭಾಮಂಟಪ) ಯದುವಂಶದ ಅರಸು ಓಲಗ ಕೊಡುವುದು ಉಚಿತವಾದುದು. ಈ ಮಾತನ್ನು ಕೃಷ್ಣನು ಹೇಳಿದನೆಂದು ಆ ಇಂದ್ರನಿಗೆ ತಿಳಿಸು" ಎಂದನು.

೧೬. ಹೀಗೆ ಕೃಷ್ಣನು ಆಜ್ಞಾಪಿಸುತ್ತಲೇವಾಯುವು ಇಂದ್ರನ ಬಳಿಗೆ ಹೋಗಿ ಆ ಮಾತೆಲ್ಲವನ್ನೂ ಅವನಿಗೆ ತಿಳಿಸಿದನು. ಆಗ ಆ ಪುರಂದರನೂ (ಮರುಮಾತಿಲ್ಲದೆ) ಆ ಸುಧರ್ಮಾ ಎಂಬ ಸಭೆಯನ್ನು ವಾಯುವಿನೊಡನೆ ಕಳುಹಿಸಿಕೊಟ್ಟನು.

ವಾಯುನಾ ಚಾಹೃತಾಂ ದಿವ್ಯಾಂ ತೇ ಸಭಾಂ ಯದುಪುಂಗವಾಃ ।
ಬುಭುಜುಃ ಸರ್ವರತ್ನಾಢ್ಯಾಂ ಗೋವಿಂದಭುಜಸಂಶ್ರಯಾಃ ॥ ೧೭ ॥

ವಿದಿತಾಖಿಲವಿಜ್ಞಾನೌ ಸರ್ವಜ್ಞಾನಮಯಾವಪಿ ।
ಶಿಷ್ಯಾಚಾರ್ಯಕ್ರಮಂ ವೀರೌ ಖ್ಯಾಪಯಂತೌ ಯದೂತ್ತಮೌ ॥ ೧೮ ॥

ತತಃ ಸಾಂದೀಪನಿಂ ಕಾಶ್ಯಮವಂತಿಪುರವಾಸಿನಂ ।
ಅಸ್ತ್ರಾರ್ಥಂ ಜಗ್ಮತುರ್ವೀರೌ ಬಲದೇವಜನಾರ್ದನೌ ॥ ೧೯ ॥

ತಸ್ಯ ಶಿಷ್ಯತ್ವಮಭ್ಯೇತ್ಯ ಗುರುವೃತ್ತಿಪರೌ ಹಿ ತೌ ।
ದರ್ಶಯಾಂಚಕ್ರತುರ್ವೀರಾವಾಚಾರಮಖಿಲೇ ಜನೇ ॥ ೨೦ ॥

ಸರಹಸ್ಯಂ ಧನುರ್ವೇದಂ ಸಸಂಗ್ರಹಮಧೀಯತಾಂ ।
ಅಹೋರಾತ್ರೈಶ್ಚತುಃಷಷ್ಟ್ಯಾ ತದದ್ಭುತಮಭೂದ್ದ್ವಿಜಾಃ ॥ ೨೧ ॥

---

೧೭. ಆ ದಿವ್ಯವಾದ ಸುಧರ್ಮೆಯನ್ನು ವಾಯುವು ತಂದೊಪ್ಪಿಸುತ್ತಲೇ ಎಲ್ಲ ಬಗೆಯ ರತ್ನಗಳೂ ಕೆತ್ತಲ್ಪಟ್ಟು ಹೊಳೆಹೊಳೆಯುತ್ತಿದ್ದ ಆ ಸಭೆಯಲ್ಲಿ ಶ್ರೀಕೃಷ್ಣನ ಬಾಹುಮಂಡಲದಿಂದ ಪರಿಪಾಲಿತರಾದ ಯದುಪುಂಗವರೆಲ್ಲರೂ, ಮೆರೆಯುತ್ತಿದ್ದರು.

೧೮-೧೯. ಅನಂತರ ಎಲ್ಲ ವಿಷಯಗಳನ್ನೂ ಬಲ್ಲವರೂ, ಸಕಲವಿಜ್ಞಾನ ಸ್ವರೂಪರೂ ಆದ ಆ ಕೃಷ್ಣ ಬಲರಾಮರಿಬ್ಬರೂ ಲೋಕದಲ್ಲಿ ಗುರುಶಿಷ್ಯ ಧರ್ಮವನ್ನು ಪ್ರಚುರಪಡಿಸುವ ಸಲುವಾಗಿ, ಕಾಶೀದೇಶೀಯನೂ, ಅವಂತೀಪುರದಲ್ಲಿ ವಾಸಿಸುತ್ತಿರುವನೂ ಆದ ಸಾಂದೀಪನಿಯೆಂಬ ಗುರುವಿನ ಬಳಿಗೆ ಶಸ್ತ್ರಾಸ್ತ್ರಗಳ ವಿದ್ಯೆಯನ್ನು ಕಲಿಯಲು ಹೊರಟರು.

೨೦. ಆ ವೀರರಿಬ್ಬರೂ, ಆತನಲ್ಲಿ ಶಿಷ್ಯವೃತ್ತಿಯನ್ನು ಕೈಗೊಂಡು, ಗುರುಸೇವೆಯನ್ನೆಸಗುತ್ತಾ ಸಕಲಜನರಿಗೂ ಸದಾಚಾರವನ್ನು ತೋರ್ಪಡಿಸಿದರು.

೨೧. ಎಲೈ ಬ್ರಾಹ್ಮಣೋತ್ತಮರೇ, ಆ ಆಶ್ಚರ್ಯವನ್ನೇನೆಂದು ಹೇಳಲಿ. ಅವರು ಧನುರ್ವೇದವೆಲ್ಲನ್ನೂ, ಅದರಲ್ಲಿರುವ ಸಕಲ ರಹಸ್ಯಗಳನ್ನೂ ಅಸ್ತ್ರಗಳ ಉಪಸಂಹಾರಕ್ರಮವನ್ನೂ ಅರವತ್ತುನಾಲ್ಕು ಅಹೋರಾತ್ರಿಗಳಲ್ಲಿ (ಎರಡು ತಿಂಗಳಲ್ಲಿ) ಕಲಿತುಬಿಟ್ಟರು.

**ಸಾಂದೀಪನಿರಸಂಭಾವ್ಯಂ ತಯೋಃ ಕರ್ಮಾತಿಮಾನುಷಂ ।**
**ವಿಚಿಂತ್ಯ ತೌ ತದಾ ಮೇನೇ ಪ್ರಾಪ್ತೌ ಚಂದ್ರದಿವಾಕರೌ ॥ ೨೨ ॥**

**ಅಸ್ತ್ರಗ್ರಾಮಮಶೇಷಂ ಚ ಪ್ರೋಕ್ತಮಾತ್ರಮವಾಪ್ಯ ತೌ ।**
**ಊಚತುರ್ವ್ರಿಯತಾಂ ಯಾ ತೇ ದಾತವ್ಯಾ ಗುರುದಕ್ಷಿಣಾ ॥ ೨೩ ॥**

**ಸೋऽಪ್ಯತೀಂದ್ರಿಯಮಾಲೋಕ್ಯ ತಯೋಃ ಕರ್ಮ ಮಹಾಮತಿಃ ।**
**ಅಯಾಚತ ಮೃತಂ ಪುತ್ರಂ ಪ್ರಭಾಸೇ ಲವಣಾರ್ಣವೇ ॥ ೨೪ ॥**

**ಗೃಹೀತಾಸ್ತ್ರೌ ತತಸ್ತೌ ತು ಗತ್ವಾ ತಂ ಲವಣೋದಧಿಂ ।**
**ಊಚುತುಶ್ಚ ಗುರೋಃ ಪುತ್ರೋ ದೀಯತಾಮಿತಿ ಸಾಗರಂ ॥ ೨೫ ॥**

---

೨೨. ಆಗ ಆ ಸಾಂದೀಪನಿಯು, ಮಾನುಷ್ಯಮಾತ್ರರಿಗೆ ಅಸಾಧ್ಯವಾದ ಊಹೆಗೂ ಸಿಲುಕದ ಅವರೀರ್ವರ ಅಸಾಧಾರಣ ಕೌಶಲವನ್ನು ಕಂಡು ಸೂರ್ಯಚಂದ್ರರೇ ಈರೀತಿ ಅವತರಿಸಿರಬಹುದೆಂದು ತನ್ನ ಮನಸ್ಸಿನಲ್ಲಿ ನಿಶ್ಚಯಿಸಿದನು.

೨೩. ಆ ಸಾಂದೀಪನಿಯು ಒಂದುಬಾರಿ ಉಪದೇಶಿಸಿದ ಮಾತ್ರದಿಂದಲೇ ಸಮಗ್ರವಾದ ಅಸ್ತ್ರಗಳೆಲ್ಲವನ್ನೂ ಆ ಕೃಷ್ಣಬಲರಾಮರು ಅರಿತವರಾಗಿ ಆ ಮಹರ್ಷಿಯನ್ನು ಕುರಿತು ಕೊಡಬೇಕಾದ ಗುರುದಕ್ಷಿಣೆಯನ್ನು ಆಜ್ಞಾಪಿಸು ವಂತೆ ಕೇಳಿಕೊಂಡರು.

೨೪. ಆಗ ಮಹಾಪ್ರಾಜ್ಞನಾದ ಆ ಸಾಂದೀಪಮುನಿಯು, ಇಂದ್ರಿಯ ಗಳಿಗೂ ಗೋಚರವಾಗಲಾರದಂತಹ ಅದ್ಭುತ ಕಾರ್ಯಗಳನ್ನು ಅವರು ಲೀಲಾ ಮಾತ್ರದಲ್ಲಿ ಮಾಡಿಬಿಡುವುದನ್ನು ಕಂಡು, ಪ್ರಭಾಸತೀರ್ಥದಲ್ಲಿ ಸಮುದ್ರದ ಪಾಲಾಗಿ ಸತ್ತುಹೋದ ತನ್ನ ಮಗನನ್ನು ತಂದುಕೊಡುವಂತೆ ಆ ಕೃಷ್ಣ ಬಲರಾಮರಿಗೆ ತಿಳಿಸಿದನು.

೨೫. ಆಗ ಆ ವೀರರು ಅಸ್ತ್ರಗಳನ್ನು ಧರಿಸಿದವರಾಗಿ, ಲವಣಸಮು ದ್ರದ ಬಳಿಗೆ ಹೋಗಿ ತಮ್ಮ ಗುರುವಿನ ಮಗನನ್ನು ತಂದೊಪ್ಪಿಸುವಂತೆ ಹೇಳಿದರು.

ಕೃತಾಂಜಲಿಪುಟಶ್ಚಾಬ್ಧಿಸ್ತಾವಥ ದ್ವಿಜಸತ್ತಮಾಃ ।
ಉವಾಚ ನ ಮಯಾ ಪುತ್ರೋ ಹೃತಃ ಸಾಂದೀಪನೇರಿತಿ ॥ ೨೬ ॥

ದೈತ್ಯಃ ಪಂಚಜನೋ ನಾಮ ಶಂಖರೂಪಃ ಸ ಬಾಲಕಂ ।
ಜಗ್ರಾಹ ಸೋಽಸ್ತಿ ಸಲಿಲೇ ಮನ್ಯೈವಾಸುರಸೂದನ ॥ ೨೭ ॥

ಇತ್ಯುಕ್ತೋಽಂತರ್ಜಲಂ ಗತ್ವಾ ಹತ್ವಾ ಪಂಚಜನಂ ತಥಾ ।
ಕೃಷ್ಣೋ ಜಗ್ರಾಹ ತಸ್ಯಾಸ್ಥಿಪ್ರಭವಂ ಶಂಖಮುತ್ತಮಂ ॥ ೨೮ ॥

ಯಸ್ಯ ನಾದೇನ ದೈತ್ಯಾನಾಂ ಬಲಹಾನಿಃ ಪ್ರಜಾಯತೇ ।
ದೇವಾನಾಂ ವರ್ಧತೇ ತೇಜೋ ಯಾತ್ಯಧರ್ಮಶ್ಚ ಸಂಕ್ಷಯಂ ॥ ೨೯ ॥

ತಂ ಪಾಂಚಜನ್ಯಮಾಪೂರ್ಯ ಗತ್ವಾ ಯಮಪುರೀಂ ಹರಿಃ ।
ಬಲದೇವಶ್ಚ ಬಲವಾನ್ ಜಿತ್ವಾ ವೈವಸ್ವತಂ ಯಮಂ ॥ ೩೦ ॥

---

೨೬-೨೭. ಎಲೈ ಬ್ರಾಹ್ಮಣಶ್ರೇಷ್ಠರೇ, ಬಳಿಕ ಆ ಸಮುದ್ರನು ಕೈಗಳನ್ನು ಮುಗಿದುಕೊಂಡು “ ನಿಮ್ಮ ಗುರುವಾದ ಸಾಂದೀಪಿನಿಯಪುತ್ರನನ್ನು ಅಪಹರಿಸಿದವನು ನಾನಲ್ಲ. ಎಲೈ ಅಸುರಸಂಹಾರಿಯೇ! ಪಂಚಜನನೆಂಬ ದೈತ್ಯನೊಬ್ಬನು ಶಂಖರೂಪದಲ್ಲಿ ಬಂದು ನಿಮ್ಮ ಗುರುಪುತ್ರನನ್ನು ಕೊಂಡೊಯ್ದನು. ಅವನು ನನ್ನ ನೀರಿನಲ್ಲಿಯೇ ಅಡಗಿರುವನು.” ಎಂದು ತಿಳಿಸಿದನು.

೨೮-೨೯. ಹೀಗೆ ಸಮುದ್ರನು ಹೇಳುತ್ತಲೇ ಕೃಷ್ಣನು ಆ ನೀರಿನೊಳಗೆ ಪ್ರವೇಶಿಸಿ ಅಲ್ಲಿ ಅಡಗಿದ್ದ ಪಂಚಜನನೆಂಬ ದೈತ್ಯನನ್ನು ಕೊಂದುದಲ್ಲದೆ, ಅವನ ಅಸ್ಥಿಗಳಿಂದ ನಿರ್ಮಿಸಲ್ಪಟ್ಟ ಪಾಂಚಜನ್ಯವೆಂಬ ಶ್ರೇಷ್ಠವಾದ ಶಂಖವನ್ನೂ ತೆಗೆದುಕೊಂಡು ಬಂದನು. ಆ ಶಂಖದ ನಾದವನ್ನು ಕೇಳುತ್ತಲೇ ದೈತ್ಯರ ಬಲವು ಕುಗ್ಗಿಹೋಗುವುದು. ದೇವತೆಗಳ ಶೌರ್ಯವು ಹೆಚ್ಚುತ್ತಾ ಬರುವುದು. ಅಧರ್ಮವು ನಾಶವಾಗುವುದು.

೩೦-೩೧. ಇಂತಹ ಮಹಿಮೆಯಿಂದ ಕೂಡಿದ ಆ ಪಾಂಚಜನ್ಯವೆಂಬ ಶಂಖವನ್ನು ಒಂದುಬಾರಿ ಊದಿ, ಆ ಶ್ರೀಕೃಷ್ಣನು, ಬಲಶಾಲಿಯಾದ ಆ ಬಲರಾಮನೊಡನೆ ಯಮನಪಟ್ಟಣಕ್ಕೆ ಹೋಗಿ, ಸೂರ್ಯಸುತನಾದ ಆತನನ್ನು

ತಂ ಬಾಲಂ ಯಾತನಾಸಂಸ್ಥಂ ಯಥಾಪೂರ್ವಶರೀರಿಣಂ ।
ಪಿತ್ರೇ ಪ್ರದತ್ತವಾನ್ಕೃಷ್ಣೋ ಬಲಶ್ಚ ಬಲಿನಾಂ ವರಃ ॥ ೩೧ ॥

ಮಥುರಾಂ ಚ ಪುನಃ ಪ್ರಾಪ್ತಾವುಗ್ರಸೇನೇನ ಪಾಲಿತಾಂ ।
ಪ್ರಹೃಷ್ಟಪುರುಷಸ್ತ್ರೀಕಾವುಭೌ ರಾಮಜನಾರ್ದನೌ ॥ ೩೨ ॥

ಇತಿ ಶ್ರೀಮಹಾಪುರಾಣೇ ಆದಿಬ್ರಾಹ್ಮೇ ಬಾಲಚರಿತೇ ಚತುರ್ನವ-
ತ್ಯಧಿಕಶತತಮೋಽಧ್ಯಾಯಃ

---

ಗೆದ್ದು, ಯಾತನೆಗಳನ್ನು ಅನುಭವಿಸುತ್ತಿದ್ದ ಆ ಗುರುಪುತ್ರನನ್ನು ಬಿಡಿಸಿ, ಆ ಬಾಲಕನು ಮೊದಲು ಹೇಗೆ ಇದ್ದನೋ ಅದೇರೀತಿ ತಮ್ಮ ಗುರುವಾದ ಸಾಂದೀಪನಿಗೆ ಒಪ್ಪಿಸಿದನು.

೩೨. ಬಳಿಕ ಆ ಬಲರಾಮಕೃಷ್ಣರು ಉಗ್ರಸೇನನಿಂದ ಪರಿಪಾಲಿತವಾದ ಮಥುರಾಪಟ್ಟಣಕ್ಕೆ ಮರಳಿ ಬಂದು ಸೇರಿದರು. ಅವರನ್ನು ಕಂಡು ಆ ಪುರದ ನರನಾರಿಯರೆಲ್ಲರೂ ಆನಂದಭರಿತರಾದರು.

ಇಲ್ಲಿಗೆ ಶ್ರೀಬ್ರಹ್ಮಪುರಾಣದಲ್ಲಿ ಕೃಷ್ಣಬಾಲಚರಿತ್ರೆಯಲ್ಲಿ
ನೂರತೊಂಭತ್ತನಾಲ್ಕನೆಯ ಅಧ್ಯಾಯವು ಮುಗಿದುದು.

---

ಶ್ರೀಃ

ಓಂ ತತ್ಸದ್ಬ್ರಹ್ಮಣೇನಮಃ

## ಅಥ ಮಹಾಪುರಾಣೇ ಬ್ರಾಹ್ಮೇ

## ಪಂಚನವತ್ಯಧಿಕಶತತಮೋಽಧ್ಯಾಯಃ



॥ ವ್ಯಾಸ ಉವಾಚ ॥

ಜರಾಸಂಧಸುತೇ ಕಂಸ ಉಪಯೇಮೇ ಮಹಾಬಲಃ ।
ಅಸ್ತಿಃ ಪ್ರಾಪ್ತಿಶ್ಚ ಭೋ ವಿಪ್ರಾಸ್ತಯೋರ್ಭರ್ತೃಹಣಂ ಹರಿಂ ॥ ೧ ॥

ಮಹಾಬಲಪರೀವಾರೋ ಮಾಗಧಾಧಿಪತಿರ್ಬಲೀ ।
ಹಂತುಮಭ್ಯಾಯಯೌ ಕೋಪಾಜ್ಜರಾಸಂಧಃ ಸಯಾದವಂ ॥ ೨ ॥

ಉಪೇತ್ಯ ಮಥುರಾಂ ಸೋಽಥ ರುರೋಧ ಮಗಧೇಶ್ವರಃ ।
ಅಕ್ಷೌಹಿಣೀಭಿಃ ಸೈನ್ಯಸ್ಯ ತ್ರಯೋವಿಂಶತಿಭಿರ್ವೃತಃ ॥ ೩ ॥

---

### ನೂರತೊಂಭತ್ತೈದನೆಯ ಅಧ್ಯಾಯವು

೧-೨. ಮಹಾಬಲಶಾಲಿಯಾದ ಆ ಕಂಸನಿಗೆ ಅಸ್ತಿ ಮತ್ತು ಪ್ರಾಪ್ತಿಯೆಂಬ ಇಬ್ಬರು ಪತ್ನಿಯರಿದ್ದರು. ಅವರು ಜರಾಸಂಧನ ಪುತ್ರಿಯರು. ತನ್ನ ಪುತ್ರಿಯರ ಪತಿಯನ್ನು ಶ್ರೀಕೃಷ್ಣನು ಸಂಹರಿಸಿದ ಸುದ್ದಿಯನ್ನು ಕೇಳಿ ಮಗಧಾಧಿಪತಿಯೂ ಬಲಾಢ್ಯನೂ ಆದ ಆ ಜರಾಸಂಧನು ಭಾರಿ ಸೇನೆಯೊಡನೆ, ಆ ಕೃಷ್ಣನನ್ನೂ ಸಮಸ್ತ ಯಾದವರನ್ನೂ ಕೊಲ್ಲಬೇಕೆಂದು ದಂಡೆತ್ತಿ ಬಂದನು.

೩. ಆ ಮಗಧೇಶ್ವರನು ತನ್ನ ಇಪ್ಪತ್ತುಮೂರು ಅಕ್ಷೋಹಿಣೀ ಸೇನೆಗಳೊಡಗೂಡಿ ಮಥುರೆಗೆ ಬಂದು ಮುತ್ತಿಗೆ ಹಾಕಿದನು.

ನಿಷ್ಕ್ರಮ್ಯಾಲ್ಪಪರೀವಾರಾವುಭೌ ರಾಮಜನಾರ್ದನೌ ।
ಯುಯುಧಾತೇ ಸಮಂ ತಸ್ಯ ಬಲಿನೌ ಬಲಿಸೈನಿಕೈಃ ॥ ೪ ॥

ತತೋ ಬಲಶ್ಚ ಕೃಷ್ಣಶ್ಚ ಮತಿಂ ಚಕ್ರೇ ಮಹಾಬಲಃ ।
ಆಯುಧಾನಾಂ ಪುರಾಣಾನಾಮಾದಾನೇ ಮುನಿಸತ್ತಮಾಃ ॥ ೫ ॥

ಅನಂತರಂ ಚಕ್ರಶಾರ್ಙ್ಗೇ ತೂಣೌ ಚಾಪ್ಯಕ್ಷಯೌ ಶರೈಃ ।
ಆಕಾಶಾದಾಗತೌ ವೀರೌ ತದಾ ಕೌಮೋದಕೀ ಗದಾ ॥ ೬ ॥

ಹಲಂ ಚ ಬಲಭದ್ರಸ್ಯ ಗಗನಾದಾಗಮತ್ಕರಂ ।
ಬಲಸ್ಯಾಭಿಮತಂ ವಿಪ್ರಾಃ ಸುನಂದಂ ಮುಶಲಂ ತಥಾ ॥ ೭ ॥

ತತೋ ಯುದ್ಧೇ ಪರಾಜಿತ್ಯ ಸ್ವಸೈನ್ಯಂ ಮಗಧಾಧಿಪಂ ।
ಪುರೀಂ ವಿವಿಶತುರ್ವೀರಾವುಭೌ ರಾಮಜನಾರ್ದನೌ ॥ ೮ ॥

ಜಿತೇ ತಸ್ಮಿನ್ಸುದುರ್ವೃತ್ತೇ ಜರಾಸಂಧೇ ದ್ವಿಜೋತ್ತಮಾಃ ।
ಜೀವಮಾನೇ ಗತೇ ತತ್ರ ಕೃಷ್ಣೋ ಮೇನೇ ನ ತಂ ಜಿತಂ ॥ ೯ ॥

---

೪. ಆಗ ಕೃಷ್ಣನೂ ಬಲರಾಮನೂ ಅಲ್ಪವಾದ ಪರಿವಾರದೊಡನೆ ಹೊರಟು, ಆ ಬಲಾಢ್ಯರಾದ ಸೈನಿಕರೊಂದಿಗೆ ಹೋರಾಡಿದರು.

೫. ಎಲೈ ಮುನಿಶ್ರೇಷ್ಠರಿರಾ! ಆಗ ಯುದ್ಧಮಾಡುತ್ತಿರುವ ಆ ಕೃಷ್ಣ ಬಲರಾಮರಿಬ್ಬರೂ ತಮ್ಮ ಪ್ರಾಚೀನವಾದ ಆಯುಧಗಳನ್ನು ಪ್ರಯೋಗಿಸ ಬೇಕೆಂದು ಮನಸ್ಸುಮಾಡಿದರು.

೬. ಕೂಡಲೇ, ಅಂತರಿಕ್ಷದಿಂದ ಸುದರ್ಶನ ಚಕ್ರವೂ, ಶಾರ್ಙ್ಗ ಧನುಸ್ಸೂ, ಬಾಣಗಳಿಂದ ತುಂಬಿದ್ದ ಅಕ್ಷಯವಾದ ಬತ್ತಳಿಕೆಗಳೆರಡೂ, ಕೌಮೋದಕಿಯೆಂಬ ಗದೆಯೂ ಶ್ರೀಕೃಷ್ಣನ ಕೈಗೆ ಬಂದುವು.

೭. ಎಲೈ ವಿಪ್ರೋತ್ತಮರೇ, ಅದೇರೀತಿ ಬಲಭದ್ರನಿಗೆ ಪ್ರಿಯವಾದ ಸುನಂದವೆಂಬ ಹಲವೂ (ನೇಗಿಲೂ) ಮುಸಲಾಯುಧವೂ ಆತನ ಕೈಸೇರಿದುವು.

೮. ಅನಂತರ ಆ ವೀರರು ಸೈನ್ಯ ಸಮೇತನಾದ ಆ ಮಗಧಾಧಿಪತಿ ಯನ್ನು ಯುದ್ಧದಲ್ಲಿ ಸೋಲಿಸಿ ತಮ್ಮ ಪಟ್ಟಣವನ್ನು ಪ್ರವೇಶಿಸಿದರು.

೯. ಎಲೈ ಬ್ರಾಹ್ಮಣಶ್ರೇಷ್ಠರಿರಾ, ದುಷ್ಟಾಚಾರ ನಿರತನಾದ ಆ ಜರಾಸಂಧನು ಯುದ್ಧದಲ್ಲಿ ಸೋತು ಜೀವದೊಡನೆ ಹಿಂದಿರುಗಿದುದರಿಂದ ಆ ಕೃಷ್ಣನು ತನ್ನ ಶತ್ರುವಿನ್ನೂ ಸೋಲಲಿಲ್ಲವೆಂದೇ ಭಾವಿಸಿದನು.

ಪುನರಪ್ಯಾಜಗಾಮಾಥ ಜರಾಸಂಧೋ ಬಲಾನ್ವಿತಃ ।
ಜಿತಶ್ಚ ರಾಮಕೃಷ್ಣಾಭ್ಯಾಮಪಕೃತ್ಯ ದ್ವಿಜೋತ್ತಮಾಃ ॥ ೧೦ ॥

ದಶ ಚಾಷ್ಟೌ ಚ ಸಂಗ್ರಾಮಾನೇವಮತ್ಯಂತದುರ್ಮದಃ ।
ಯದುಭಿರ್ಮಾಗಧೋ ರಾಜಾ ಚಕ್ರೇ ಕೃಷ್ಣಪುರೋಗಮೈಃ ॥ ೧೧ ॥

ಸರ್ವೇಷ್ವೇವ ಚ ಯುದ್ಧೇಷು ಯದುಭಿಃ ಸ ಪರಾಜಿತಃ ।
ಅಪಕ್ರಾಂತೋ ಜರಾಸಂಧಃ ಸ್ವಲ್ಪಸೈನ್ಯೈರ್ಬಲಾಧಿಕಃ ॥ ೧೨ ॥

ತದ್ಬಲಂ ಯಾದವಾನಾಂ ವೈ ರಕ್ಷಿತಂ ಯದನೇಕಶಃ ।
ತತ್ತು ಸಂನಿಧಿಮಾಹಾತ್ಮ್ಯಂ ವಿಷ್ಣೋರಂಶಸ್ಯ ಚಕ್ರಿಣಃ ॥ ೧೩ ॥

ಮನುಷ್ಯಧರ್ಮಶೀಲಸ್ಯ ಲೀಲಾ ಸಾ ಜಗತಃ ಪತೇಃ ।
ಅಸ್ತ್ರಾಣ್ಯನೇಕರೂಪಾಣಿ ಯದರಾತಿಷು ಮುಂಚತಿ ॥ ೧೪ ॥

---

೧೦. ಆ ಜರಾಸಂಧನು ಇನ್ನೊಮ್ಮೆ ಸೈನ್ಯಗಳನ್ನು ಕೂಡಿಕೊಂಡು ರಾಮಕೃಷ್ಣರ ಮೇಲೇರಿ ಬಂದು ಅವರಿಂದ ಸೋಲಿಸಲ್ಪಟ್ಟು ಹಿಂದಿರುಗಿದನು.

೧೧. ಈರೀತಿಯಾಗಿ ಮದೋನ್ಮತ್ತನಾದ ಆ ಮಗಧರಾಜನು ಹದಿನೆಂಟು ಬಾರಿ ದಂಡೆತ್ತಿ ಬಂದು ಕೃಷ್ಣನೇ ಮೊದಲಾದ ಆ ಯದುಗಳೊಡನೆ ಯುದ್ಧಮಾಡಿದನು.

೧೨. ಆದರೇನು? ಆ ಎಲ್ಲ ಯುದ್ಧಗಳಲ್ಲಿಯೂ ಆ ಜರಾಸಂಧನು ಎಷ್ಟೇ ಭಾರಿ ಸೇನೆಯೊಡನೆ ಬಂದಿದ್ದರೂ ಅಲ್ಪಸೈನ್ಯವುಳ್ಳ ಆ ಯಾದವರ ಪರಾಕ್ರಮವನ್ನು ಸಹಿಸಲಾರದೆ, ಪರಾಜಿತನಾಗಿ ಯುದ್ಧಭೂಮಿಯಿಂದ ತಲೆತಪ್ಪಿಸಿಕೊಂಡು ಓಡಿಹೋದನು.

೧೩. ಈರೀತಿ ಅತ್ಯಲ್ಪವಾದ ಆ ಯಾದವ ಸೇನೆಯು ಅನೇಕಬಾರಿ ಆಪತ್ತಿಲ್ಲದೆ ಸಂರಕ್ಷಿಸಲ್ಪಟ್ಟಿತು. ಇದೆಲ್ಲವೂ ಮಹಾವಿಷ್ಣುವಿನ ಅಂಶಭೂತನಾದ ಆ ಶ್ರೀಕೃಷ್ಣನ ಸಾಂನಿಧ್ಯದ ಮಹಿಮೆಯಿಂದಲೇ ಆದುದೆಂದು ಅರಿಯಿರಿ.

೧೪-೧೫. ಯಾವನು ತನ್ನ ಇಚ್ಛಾಮಾತ್ರದಿಂದಲೇ, ಜಗತ್ತಿನ ಸೃಷ್ಟಿಯನ್ನೂ ಸಂಹಾರವನ್ನೂ ಮಾಡುವನೋ ಆ ಪರಮಾತ್ಮನಿಗೆ ಶತ್ರುಬಲವನ್ನು ನಾಶಮಾಡಲು ಭಾರಿ ಪ್ರಯತ್ನವು ಬೇಕೇ? ಆ ಕೃಷ್ಣನು ಶತ್ರುಸೈನ್ಯದಮೇಲೆ

**ಮನಸೈವ ಜಗತ್ಸೃಷ್ಟಿಸಂಹಾರಂ ತು ಕರೋತಿ ಯಃ ।**
**ತಸ್ಯಾರಿಪಕ್ಷಕ್ಷಪಣೇ ಕಿಯಾನುದ್ಯಮವಿಸ್ತರಃ ॥ ೧೫ ॥**

**ತಥಾಪಿ ಚ ಮನುಷ್ಯಾಣಾಂ ಧರ್ಮಸ್ತದನುವರ್ತನಂ ।**
**ಕುರ್ವನ್ಬಲವತಾ ಸಂಧಿಂ ಹೀನೈರ್ಯುದ್ಧಂ ಕರೋತ್ಯಸೌ ॥ ೧೬ ॥**

**ಸಾಮ ಚೋಪಪ್ರದಾನಂ ಚ ತಥಾ ಭೇದಂ ಚ ದರ್ಶಯನ್ ।**
**ಕರೋತಿ ದಂಡಪಾತಂ ಚ ಕ್ವಚಿದೇವ ಪಲಾಯನಂ ॥ ೧೭ ॥**

**ಮನುಷ್ಯದೇಹಿನಾಂ ಚೇಷ್ಟಾಮಿತ್ಯೇವಮನುವರ್ತತೇ ।**
**ಲೀಲಾ ಜಗತ್ಪತೇಸ್ತಸ್ಯ ಚ್ಛಂದತಃ ಸಂಪ್ರವರ್ತತೇ ॥ ೧೮ ॥**

**ಇತಿ ಶ್ರೀಮಹಾಪುರಾಣೇ ಆದಿಬ್ರಾಹ್ಮೇ ಶ್ರೀಕೃಷ್ಣಚರಿತೇ ಪಂಚ-**
**ನವತ್ಯಧಿಕಶತತಮೋऽಧ್ಯಾಯಃ**

---

ನಾನಾವಿಧವಾದ ಅಸ್ತ್ರಗಳನ್ನು ಪ್ರಯೋಗಿಸಿದುದು ಆ ಜಗತ್ಪತಿಯು ಮನುಷ್ಯ ಶರೀರವನ್ನು ಧರಿಸಿರುವುದರಿಂದ ಆ ರೀತಿ ನಟನೆಮಾಡುತ್ತಿರುವುದಕ್ಕೇ ಹೊರತು ಮತ್ತೆ ಬೇರೆ ಅಲ್ಲ.

೧೬. ಮನುಷ್ಯನಾಗಿ ಹುಟ್ಟಿದವನು, ಆ ಜನ್ಮಕ್ಕೆ ಉಚಿತವಾದ ರೀತಿಯನ್ನು ಅವಲಂಬಿಸುವುದು ನ್ಯಾಯವಲ್ಲವೇ? ಮನುಷ್ಯರಾದವರು ಬಲಪ್ಟನೊಡನೆ ಸಂಧಿಯನ್ನು ಮಾಡಿಕೊಳ್ಳುವನು. ಅಲ್ಪಬಲನೊಡನೆ ಯುದ್ಧಕ್ಕೆ ಹೋಗುವನು. ಅಲ್ಲದೆ, ಶತ್ರುವಿನ ಬಲಾಬಲವನ್ನು ವಿಮರ್ಶಿಸಿ.

೧೭. ಒಂದೆಡೆ ಸಾಮವನ್ನೂ ಮತ್ತೊಂದೆಡೆ ಭೇದವನ್ನೂ ಬೇರೊಂದೆಡೆ ದಂಡವನ್ನೂ (ಇವೇ ಉಪಾಯ ಚತುಷ್ಟಯಗಳು) ಉಪಯೋಗಿಸುವನು. ಆವಶ್ಯಕತೆಯೊದಗಿದರೆ ಅವನು ಪಲಾಯನವನ್ನೂ ಮಾಡಬೇಕಾಗುವುದು.

೧೮. ಈ ಮನುಷ್ಯಚೇಷ್ಟೆಯನ್ನೇ ಕೃಷ್ಣನು ತಾನು ಅವತಾವೆತ್ತಿರುವ ಜಾತಿಗನುಗುಣವಾಗಿ ಅನುಸರಿಸುತ್ತಿರುವನು. ಜಗತ್ತಿಗೆಲ್ಲಾ ಪ್ರಭುವಾದ ಆತನು ತನ್ನ ಇಚ್ಛೆಯಂತೆ ನಾನಾ ಲೀಲೆಗಳನ್ನು ತೋರುವನು.

ಇಲ್ಲಿಗೆ ಶ್ರೀಬ್ರಹ್ಮಪುರಾಣದಲ್ಲಿ ಶ್ರೀಕೃಷ್ಣಚರಿತವೆಂಬ ನೂರತೊಂಭತ್ತೈದನೆಯ ಅಧ್ಯಾಯವು ಮುಗಿದುದು.

ಶ್ರೀಃ

ಓಂ ತತ್ಸದ್ಬ್ರಹ್ಮಣೇನಮಃ

# ಅಥ ಬ್ರಾಹ್ಮೇ ಮಹಾಪುರಾಣೇ

## ಷಣ್ಣವತ್ಯಧಿಕಶತತಮೋಽಧ್ಯಾಯಃ

॥ ವ್ಯಾಸ ಉವಾಚ ॥

**ಗಾರ್ಗ್ಯಂ ಗೋಷ್ಠೇ ದ್ವಿಜೋ ಶ್ಯಾಲಃ ಷಂಡ ಇತ್ಯುಕ್ತವಾನ್ದ್ವಿಜಾಃ ।**
**ಯದೂನಾಂ ಸಂನಿಧೌ ಸರ್ವೇ ಜಹಸುರ್ಯಾದವಾಸ್ತದಾ ॥ ೧ ॥**

**ತತಃ ಕೋಪಸಮಾವಿಷ್ಟೋ ದಕ್ಷಿಣಾಪಥಮೇತ್ಯ ಸಃ ।**
**ಸುತಮಿಚ್ಛಂಸ್ತಪಸ್ತೇಪೇ ಯದುಚಕ್ರಭಯಾವಹಂ ॥ ೨ ॥**

**ಆರಾಧಯನ್ಮಹಾದೇವಂ ಸೋಽಯಶ್ಚೂರ್ಣಮಭಕ್ಷಯತ್ ।**
**ದದೌ ವರಂ ಚ ತುಷ್ಟೋಽಸೌ ವರ್ಷೇ ದ್ವಾದಶಕೇ ಹರಃ ॥ ೩ ॥**

---

## ನೂರತೊಂಭತ್ತೈದನೆಯ ಅಧ್ಯಾಯವು

೧. ವ್ಯಾಸನು ಹೇಳಿದನು—ಎಲೈ ವಿಪ್ರೋತ್ತಮರೇ! ಒಂದುಸಲ ಯಾದವರೆಲ್ಲರೂ ನೆರೆದಿದ್ದಾಗ ಗರ್ಗವಂಶೀಯನಾದ ಬ್ರಾಹ್ಮಣನೊಬ್ಬನನ್ನು ಆತನ ಶ್ಯಾಲಕನು (ಭಾವಮೈದುನನು) ಷಂಡನೆಂಬುದಾಗಿ ನಿಂದಿಸಿದನು. ಆಗ ಅಲ್ಲಿದ್ದ ಯಾದವರೆಲ್ಲರೂ ಹಾಸ್ಯಮಾಡಿದರು.

೨. ಆಗ ಗಾರ್ಗ್ಯನಿಗೆ ಕೋಪವುಂಟಾಯಿತು. ಅವನು ಮಥುರೆಯನ್ನು ಬಿಟ್ಟು ದಕ್ಷಿಣಾಪಥವನ್ನು ಸೇರಿ ಯಾದವರನ್ನೆಲ್ಲಾ ಸದೆಬಡಿಯುವಂತಹ ಮಗನನ್ನು ಪಡೆಯಬೇಕೆಂಬುದಾಗಿ ತಪಸ್ಸುಮಾಡಿದನು.

೩. ಆ ಗಾರ್ಗ್ಯನು ರುದ್ರನನ್ನು ಕುರಿತು ತಪಸ್ಸುಮಾಡುತ್ತಾ ಆ ಸಮಯದಲ್ಲಿ ಕಬ್ಬಿಣದ ಪುಡಿಯನ್ನು ಆಹಾರವಾಗಿ ಸೇವಿಸುತ್ತಿದ್ದನು. ಹೀಗೆ ಕಠಿಣ ನಿಯಮದಿಂದ ಅವನು ತಪಸ್ಸುಮಾಡುತ್ತಿರಲು ಹನ್ನೆರಡು ವರ್ಷದಲ್ಲಿ ರುದ್ರನು ಪ್ರೀತನಾಗಿ ವರವನ್ನಿತ್ತನು.

**ಸಂಭಾವಯಾಮಾಸ ಸ ತಂ ಯವನೇಶೋ ಹ್ಯನಾತ್ಮಜಂ ।**
**ತದ್ಯೋಷಿತ್ಸಂಗಮಾಚ್ಚಾಸ್ಯ ಪುತ್ರೋಽಭೂದಲಿಸಪ್ರಭಃ ॥ ೪ ॥**

**ತಂ ಕಾಲಯವನಂ ನಾಮ ರಾಜ್ಯೇ ಸ್ವೇ ಯವನೇಶ್ವರಃ ।**
**ಅಭಿಷಿಚ್ಯ ವನಂ ಯಾತೋ ವಜ್ರಾಗ್ರಕಠಿನೋರಸಂ ॥ ೫ ॥**

**ಸ ತು ವೀರ್ಯಮದೋನ್ಮತ್ತಃ ಪೃಥಿವ್ಯಾಂ ಬಲಿನೋ ನೃಪಾನ್ ।**
**ಪಪ್ರಚ್ಛ ನಾರದಶ್ಚಾಸ್ಮೈ ಕಥಯಾಮಾಸ ಯಾದವಾನ್ ॥ ೬ ॥**

**ಮ್ಲೇಚ್ಛಕೋಟಿಸಹಸ್ರಾಣಾಂ ಸಹಸ್ರೈಃ ಸೋಽಪಿ ಸಂವೃತಃ ।**
**ಗಜಾಶ್ವರಥಸಂಪನ್ನೈಶ್ಚಕಾರ ಪರಮೋದ್ಯಮಂ ॥ ೭ ॥**

---

೪. ಬಳಿಕ ಮಕ್ಕಳಿಲ್ಲದ ಗಾರ್ಗ್ಯನು ಅಲ್ಲಲ್ಲಿ ಸಂಚರಿಸುತ್ತಾ ಯವನ ದೇಶಕ್ಕೆ ಬರಲು ಅಲ್ಲಿಯ ಅರಸನು ಇವನನ್ನು ಮರ್ಯಾದೆಯಿಂದ ಕಂಡನು. ಕಾಲಕ್ರಮದಲ್ಲಿ ಗಾರ್ಗ್ಯನಿಗೆ ಯವನೇಶ್ವರನ ಸ್ತ್ರೀಯೊಡನೆ ಸಂಬಂಧವು ಬೆಳೆದು ಅವರಿಬ್ಬರಿಗೂ ದುಂಬಿಯಂತೆ ಕಪ್ಪಾದ ಮೈಯುಳ್ಳ ಕುಮಾರನೊಬ್ಬನು ಹುಟ್ಟಿದನು.

೫. ಅವನಿಗೆ ಕಾಲಯವನನೆಂದು ಹೆಸರಾಯಿತು. ಅವನ ಎದೆಯು ವಜ್ರಾಯುಧದಂತೆ ಕಠಿಣವಾಗಿದ್ದಿತು. ಇಂತಹ ವೀರನನ್ನು ಕಂಡು ಯವನ ದೇಶದ ಅರಸು ಅವನಿಗೆ ತನ್ನ ರಾಜ್ಯದಲ್ಲಿ ಪಟ್ಟಗಟ್ಟಿ ತಾನು ಕಾಡಿಗೆ ಹೋದನು.

೬. ಆ ಕಾಲಯವನನು ತನ್ನ ವೀರ್ಯದಿಂದಲೂ, ಬಲದಿಂದಲೂ, ಕೊಬ್ಬಿದವನಾಗಿ ಒಂದಾನೊಂದು ಸಲ ನಾರದ ಮಹರ್ಷಿಯನ್ನು ಕುರಿತು ಈ ಭೂಮಿಯಲ್ಲಿ ಬಲಾಢ್ಯರಾದ ಅರಸರು ಯಾರಿರುವರೆಂದು ಪ್ರಶ್ನಿಸಿದನು. ಆಗ ನಾರದನು ಅಂತಹ ವೀರರು ಯಾದವರೇ ಎಂಬುದಾಗಿ ತಿಳಿಸಿದನು.

೭. ಆಗ ಕಾಲಯವನನು ಆನೆಗಳಿಂದಲೂ ಕುದುರೆಗಳಿಂದಲೂ, ತೇರುಗಳಿಂದಲೂ ಸಜ್ಜಾಗಿದ್ದ, ಹತ್ತುಲಕ್ಷಕೋಟಿ ಮ್ಲೇಚ್ಛರ ಸೇನೆಯನ್ನು ಕೂಡಿಕೊಂಡು ಯಾದವರಮೇಲೆ ದಂಡೆತ್ತಿಬರಲು ಹವಣಿಸಿದನು.

ಪ್ರಯಯೌ ಚಾತವಚ್ಛಿನ್ನೈಃ ಪ್ರಯಾಣೈಃ ಸ ದಿನೇ ದಿನೇ ।
ಯಾದವಾನ್ಪ್ರತಿ ಸಾಮರ್ಷೋ ಮುನಯೋ ಮಥುರಾಂ ಪುರೀಂ ॥ ೮ ॥

ಕೃಷ್ಣೋಽಪಿ ಚಿಂತಯಾಮಾಸ ಕ್ಷಪಿತಂ ಯಾದವಂ ಬಲಂ ।
ಯವನೇನ ಸಮಾಲೋಕ್ಯ ಮಾಗಧಃ ಸಂಪ್ರಯಾಸ್ಯತಿ ॥ ೯ ॥

ಮಾಗಧಸ್ಯ ಬಲಂ ಕ್ಷೀಣಂ ಸ ಕಾಲಯವನೋ ಬಲೀ ।
ಹಂತಾ ತದಿದಮಾಯಾತಂ ಯದೂನಾಂ ವ್ಯಸನಂ ದ್ವಿಧಾ ॥ ೧೦ ॥

ತಸ್ಮಾದ್ದುರ್ಗಂ ಕರಿಷ್ಯಾಮಿ ಯದೂನಾಮತಿದುರ್ಜಯಂ ।
ಸ್ತ್ರಿಯೋಽಪಿ ಯತ್ರ ಯುಧ್ಯೇಯುಃ ಕಿಂ ಪುನರ್ವೃಷ್ಣಿಯಾದವಾಃ ॥ ೧೧ ॥

ಮಯಿ ಮತ್ತೇ ಪ್ರಮತ್ತೇ ವಾ ಸುಪ್ತೇ ಪ್ರವಸಿತೇಽಪಿ ವಾ ।
ಯಾದವಾಭಿಭವಂ ದುಷ್ಟಾ ಮಾ ಕುರ್ವನ್ವೈರಿಣೋಽಧಿಕಂ ॥ ೧೨ ॥

---

೮. ಅವನು ದಿನದಿನಕ್ಕೆ ಯಾದವರಮೇಲೆ ಹೆಚ್ಚು ಕೋಪವನ್ನು ತಾಳುತ್ತಾ ತನ್ನ ಸೇನೆಯೊಡನೆ ಪಯಣ ಹೊರಟು ಮಧ್ಯಾಹ್ನವಾದ ಕಡೆ ಬೀಡು ಬಿಡುತ್ತಾ ಮಥುರಾಪಟ್ಟಣದ ಕಡೆ ಬರುತ್ತಿದ್ದನು.

೯–೧೦. ಆಗ ಕೃಷ್ಣನು ತನ್ನ ಮನಸ್ಸಿನಲ್ಲಿ ಈರೀತಿ ಆಲೋಚಿಸಿದನು. ಅಪಾರವಾದೀ ಯವನಸೇನೆಯು ನಮ್ಮ ಯಾದವ ಸೇನೆಯನ್ನು ಮುತ್ತುವು ದನ್ನೇ ಕಾದಿದ್ದ ಜರಾಸಂಧನು ತನ್ನ ಸೇನೆಯೊಡನೆ ದಂಡೆತ್ತಿಬರುವನು. ಈ ಮಾಗಧನ (ಜರಾಸಂಧನ) ಸೇನೆಯು, ಬಲಹೀನವಾದುದು. ಯವನೇಶ್ವರ ನಾದ ಕಾಲಯವನನಾದರೋ ಬಲಶಾಲಿಯೇ ಅಹುದು. ಈಗಲೀಗ ಯಾದವ ರಿಗೆ ಎರಡುರೀತಿಯ ಕಷ್ಟವು ಬಂದೊದಗಿರುವುದು.

೧೧. ಆದುದರಿಂದ ಶತ್ರುಗಳಾರಿಗೂ ಜಯಿಸಲು ಸಾಧ್ಯವಾಗದಂತಹ ದುರ್ಗವೊಂದನ್ನು ಯಾದವರಿಗೆ ಮಾಡಿಕೊಡುವೆನು. ಆ ದುರ್ಗದಲ್ಲಿದ್ದರೆ ಹೆಂಗಸರೂ ಸಹ ಹೋರಾಡಬಲ್ಲರು. ಇನ್ನು ವೃಷ್ಣಿಗಳನ್ನೂ ಯಾದವರನ್ನೂ ಬೇರೆ ಹೇಳಬೇಕೆ ?

೧೨. ನಾನು ಮೈಮರೆತಿರಲಿ, ಪ್ರಮಾದದಿಂದ ಎಚ್ಚರತಪ್ಪಿರಲಿ, ನಿದ್ದೆಹೋಗುತ್ತಿರಲಿ, ಇಲ್ಲವೇ ಊರನ್ನು ಬಿಟ್ಟು ಎಲ್ಲಿಯಾದರೂ ಹೋಗಿರಲಿ, ಅಂತಹಸಮಯದಲ್ಲಿಯೂ ಸಹ ಈ ದುಷ್ಟರಾದ ಶತ್ರುಗಳು ಆ ಯಾದವ ರನ್ನು ಸೋಲಿಸಲಾರರು.

ಇತಿ ಸಂಚಿಂತ್ಯ ಗೋವಿಂದೋ ಯೋಜನಾನಿ ಮಹೋದಧಿಂ ।
ಯಯಾಚೇ ದ್ವಾದಶ ಪುರೀಂ ದ್ವಾರಕಾಂ ತತ್ರ ನಿರ್ಮಮೇ ॥ ೧೩ ॥

ಮಹೋದ್ಯಾನಾಂ ಮಹಾವಪ್ರಾಂ ತಡಾಗಶತಶೋಭಿತಾಂ ।
ಪ್ರಾಕಾರಶತಸಂಬಾಧಾಮಿಂದ್ರಸ್ಯೇವಾಮರಾವತೀಂ ॥ ೧೪ ॥

ಮಥುರಾವಾಸಿನಂ ಲೋಕಂ ತತ್ರಾನೀಯ ಜನಾರ್ದನಃ ।
ಆಸನ್ನೇ ಕಾಲಯವನೇ ಮಥುರಾಂ ಚ ಸ್ವಯಂ ಯಯೌ ॥ ೧೫ ॥

ಬಹಿರಾವಾಸಿತೇ ಸೈನ್ಯೇ ಮಥುರಾಯಾ ನಿರಾಯುಧಃ ।
ನಿರ್ಜಗಾಮ ಸ ಗೋವಿಂದೋ ದದರ್ಶ ಯವನಶ್ಚ ತಂ ॥ ೧೬ ॥

---

೧೩. ಹೀಗೆಂದು ಆಲೋಚಿಸಿ ಶ್ರೀಕೃಷ್ಣನು ಹನ್ನೆರಡು ಯೋಜನೆದಷ್ಟು ವಿಸ್ತಾರವಾದ ಪ್ರದೇಶವನ್ನು ಕೊಡುವಂತೆ ಸಮುದ್ರವನ್ನು ಕೇಳಿದನು ಅದರಂತೆ ಅಷ್ಟು ಪ್ರದೇಶವನ್ನು ಸಮುದ್ರವು ಕೊಡಲು ಅಲ್ಲಿ ದ್ವಾರಕೆಯೆಂಬ ನಗರವನ್ನು ಕಟ್ಟಿಸಿದನು.

೧೪. ದ್ವಾರಕೆಯು ಭಾರಿಭಾರಿ ಉದ್ಯಾನವನಗಳಿಂದಲೂ, ದೊಡ್ಡ ದೊಡ್ಡ ಕೋಟೆಗಳಿಂದಲೂ ನೂರಾರು ಜಲಾಶಯಗಳಿಂದಲೂ, ನೂರಾರು ಪ್ರಾಕಾರಗಳಿಂದಲೂ ಪರಿವೃತವಾಗಿ ದೇವೇಂದ್ರನ ಅಮರಾವತಿಯನ್ನು ಹೋಲುತ್ತಾ ಮೆರೆಯುತ್ತಿತ್ತು.

೧೫. ಬಳಿಕ ಮಥುರಾನಗರದಲ್ಲಿದ್ದ ಜನಗಳೆಲ್ಲರನ್ನೂ ದ್ವಾರಕೆಗೆ ಕರೆತಂದು ಬಿಟ್ಟು ಕಾಲಯವನನು ಮಥುರೆ ಸಮೀಪಕ್ಕೆ ಬಂದಾಗ ತಾನೇ ಮಥುರೆಗೆ ಹೊರಟನು.

೧೬. ಅನಂತರ ಕಾಲಯವನನ ಸೇನೆಯು ಮಥುರೆಯ ಹೊರಗೆ ಮುತ್ತಿಗೆಹಾಕಿ ನಿಂತಿತು. ಆಗ ಶ್ರೀಕೃಷ್ಣನು ಯಾವೊಂದು ಆಯುಧವನ್ನೂ ಧರಿಸದೆ ಬರಿಗೈಯಲ್ಲಿ ಮಥುರೆಯಿಂದ ಹೊರಟು ಯುದ್ಧಭೂಮಿಗೆ ಬಂದನು. ಇದನ್ನು ಕಾಲಯವನನು ಕಂಡನು.

ಸಜ್ಞಾತ್ವಾ ವಾಸುದೇವಂ ತಂ ಬಾಹುಪ್ರಹರಣೋ ನೃಪಃ ।
ಅನುಯಾತೋ ಮಹಾಯೋಗಿಚೇತೋಭಿಃ ಪ್ರಾಪ್ಯತೇ ನ ಯಃ ॥ ೧೭ ॥

ತೇನಾನುಯಾತಃ ಕೃಷ್ಣೋಽಪಿ ಪ್ರವಿವೇಶ ಮಹಾಗುಹಾಂ ।
ಯತ್ರ ಶೇತೇ ಮಹಾವೀರ್ಯೋ ಮುಚುಕುಂದೋ ನರೇಶ್ವರಃ ॥ ೧೮ ॥

ಸೋಽಪಿ ಪ್ರವಿಷ್ಟೋ ಯವನೋ ದೃಷ್ಟ್ವಾ ಶಯ್ಯಾಗತಂ ನರಂ ।
ಪಾದೇನ ತಾಡಯಾಮಾಸ ಕೃಷ್ಣಂ ಮತ್ವಾ ಸ ದುರ್ಮತಿಃ ॥ ೧೯ ॥

ದೃಷ್ಟಮಾತ್ರಶ್ಚ ತೇನಾಸೌ ಜಜ್ವಾಲ ಯವನೋಽಗ್ನಿನಾ ।
ತತ್ಕ್ರೋಧಜೇನ ಮುನಯೋ ಭಸ್ಮೀಭೂತಶ್ಚ ತತ್ಕ್ಷಣಾತ್ ॥ ೨೦ ॥

---

೧೭. ಆಗವನು ಇವನೇ ವಸುದೇವನ ಮಗನಾದ ಶ್ರೀಕೃಷ್ಣನೆಂದರಿತು ತಾನೂ ಸಹ ಯಾವ ಆಯುಧವನ್ನೂ ಧರಿಸದೆ ಕೇವಲ ಬಾಹುಸಹಾಯನಾಗಿ ಮುಂದೆ ಬಂದು ಯಾವಾತನನ್ನು ಮಹಾಯೋಗಿಗಳ ಮನಸ್ಸೂ ಸಹ ಅನುಸರಿಸಲು ಅಸಾಧ್ಯವಿಲ್ಲದಿರುವುದೋ ಆ ಶ್ರೀ ಕೃಷ್ಣನನ್ನು ಹಿಂಬಾಲಿಸಿದನು.

೧೮. ಹೀಗೆ ಕಾಲಯವನನು ತನ್ನನ್ನು ಹಿಂಬಾಲಿಸುತ್ತಿರುವುದನ್ನರಿತು ಮಹಾ ವೀರಾಗ್ರಣಿಯಾದ ಮಚುಕುಂದನೆಂಬ ರಾಜರ್ಷಿಯು ಮಲಗಿ ನಿದ್ರೆ ಮಾಡುತ್ತಿದ್ದ ಭಾರಿ ಗುಹೆಯೊಂದನ್ನು ಶ್ರೀಕೃಷ್ಣನು ಪ್ರವೇಶಿಸಿದನು.

೧೯. ಕೃಷ್ಣನನ್ನು ಹಿಂಬಾಲಿಸಿ ಬರುತ್ತಿದ್ದ ಕಾಲಯವನನೂ ಕೂಡ ಗುಹೆಯನ್ನು ಪ್ರವೇಶಿಸಿ, ಅಲ್ಲಿ ಮಲಗಿ ನಿದ್ದೆಹೋಗುತ್ತಿದ್ದ ಮನುಷ್ಯನೇ ಶ್ರೀ ಕೃಷ್ಣನೆಂಬುದಾಗಿ ಭಾವಿಸಿ ದುರ್ಬುದ್ಧಿಯಿಂದ ಕಾಲಿನಿಂದ ಒದ್ದನು.

೨೦. ಎಲೈ ಮುನಿಗಳಿರಾ, ಮಲಗಿದ್ದ ಮನುಷ್ಯನು ಎಚ್ಚರಹೊಂದಿ ಕೋಪದಿಂದ ಕಣ್ಣುಬಿಟ್ಟು ನೋಡಲು ಕಾಲಯವನನು ಅದೇ ಕೋಪಾಗ್ನಿಯಿಂದ ಹೊತ್ತಿಕೊಂಡು ಉರಿಯತೊಡಗಿ ಕ್ಷಣಮಾತ್ರದಲ್ಲಿ ಭಸ್ಮವಾಗಿಬಿಟ್ಟನು.

ಸ ಹಿ ದೇವಾಸುರೇ ಯುದ್ಧೇ ಗತ್ವಾ ಜಿತ್ವಾ ಮಹಾಸುರಾನ್ ।
ನಿದ್ರಾರ್ತಃ ಸುಮಹಾಕಾಲಂ ನಿದ್ರಾಂ ವವ್ರೇ ವರಂ ಸುರಾನ್ ॥ ೨೦ ॥

ಪ್ರೋಕ್ತಶ್ಚ ದೇವೈಃ ಸಂಸುಪ್ತಂ ಯಸ್ತ್ವಾಮುತ್ಥಾಪಯಿಷ್ಯತಿ ।
ದೇಹಜೇನಾಗ್ನಿನಾ ಸದ್ಯಃ ಸ ತು ಭಸ್ಮೀಭವಿಷ್ಯತಿ ॥ ೨೧ ॥

ಏವಂ ದಗ್ಧ್ವಾ ಸ ತಂ ಪಾಪಂ ದೃಷ್ಟ್ವಾ ಚ ಮಧುಸೂದನಂ ।
ಕೆಸ್ತ್ವಮಿತ್ಯಾಹ ಸೋಽಪ್ಯಾಹ ಜಾತೋಽಹಂ ಶಶಿನಃ ಕುಲೇ ॥ ೨೩ ॥

ವಸುದೇವಸ್ಯ ತನಯೋ ಯದುವಂಶಸಮುದ್ಭವಃ ।
ಮುಚುಕುಂದೋಽಪಿ ತಚ್ಛ್ರುತ್ವಾ ವೃದ್ಧಗಾರ್ಗ್ಯವಚಃ ಸ್ಮರನ್ ॥ ೨೪ ॥

---

೨೦. ಮುಚುಕುಂದನೆಂಬ ರಾಜರ್ಷಿಯು ದೇವತೆಗಳಿಗೂ ಅಸುರರಿಗೂ ಯುದ್ಧವು ಸಂಭವಿಸಿದಾಗ ದೇವತೆಗಳಿಗೆ ಸಹಾಯಮಾಡಹೋಗಿ ಅಸುರರನ್ನೆಲ್ಲಾ ಸೋಲಿಸಿದನು. ಆಗ ಅವನಿಗೆ ಬಳಲಕೆಯಿಂದ ನಿದ್ರೆಯು ಪೀಡಿಸತೊಡಗಲು ತಾನು ಬಹುಕಾಲ ನಿರಾತಂಕವಾಗಿ ನಿದ್ದೆಮಾಡುವಹಾಗೆ ವರವನ್ನು ಕೊಡುವಂತೆ ದೇವತೆಗಳನ್ನು ಕೇಳಿಕೊಂಡನು.

೨೧. ಆಗ ದೇವತೆಗಳು ನೀನು ನಿದ್ದೆಮಾಡುತ್ತಿದ್ದಾಗ ಯಾವನು ಎಬ್ಬಿಸುವನೋ ಅವನು ಅದೇ ಕ್ಷಣದಲ್ಲಿಯೇ ಮೈಗೆ ಬೆಂಕಿ ಹೊತ್ತಿಕೊಂಡು ಭಸ್ಮವಾಗಿ ಹೋಗುವನು ಎಂಬುದಾಗಿ ವರವನ್ನಿತ್ತರು.

೨೩. ಆದುದರಿಂದ ಮುಚುಕುಂದನು ದೇವತೆಗಳ ವರಬಲದಿಂದ ಪಾಪಾತ್ಮನಾದ ಕಾಲಯವನನ್ನು ಸುಟ್ಟು ಬೂದಿಮಾಡಿ, ಅತ್ತಲಾಗಿ ನಿಂತಿದ್ದ ಕೃಷ್ಣನನ್ನು ಕಂಡು ನೀನಾರೆಂದು ಕೇಳಿದನು. ಆಗ ಕೃಷ್ಣನು ನಾನು ಚಂದ್ರವಂಶದವನು,

೨೪. ಯದುವಂಶೀಯನಾದ ವಸುದೇವನ ಮಗನು ಎಂಬುದಾಗಿ ತಿಳಿಸಿದನು. ಇದನ್ನು ಕೇಳುತ್ತಲೇ ಮುಚುಕುಂದನಿಗೆ ವೃದ್ಧನಾದ ಗಾರ್ಗ್ಯ ಮಹರ್ಷಿಯು ಹೇಳಿದ್ದ ಮಾತು ನೆನಪಿಗೆ ಬಂದಿತು.

ಸಂಸ್ಕೃತ್ಯ ಪ್ರಣಿಪತ್ಯೈನಂ ಸರ್ವಂ ಸರ್ವೇಶ್ವರಂ ಹರಿಂ ।
ಪ್ರಾಹ ಜ್ಞಾತೋ ಭವಾನ್ವಿಷ್ಣೋರಂಶಸ್ತ್ವಂ ಪರಮೇಶ್ವರಃ ॥ ೨೫ ॥
ಪುರಾ ಗಾರ್ಗ್ಯೇಣ ಕಥಿತಮಷ್ಟಾವಿಂಶತಿಮೇ ಯುಗೇ ।
ದ್ವಾಪರಾಂತೇ ಹರೇರ್ಜನ್ಮ ಯದುವಂಶೇ ಭವಿಷ್ಯತಿ ॥ ೨೬ ॥
ಸ ತ್ವಂ ಪ್ರಾಪ್ತೋ ನ ಸಂದೇಹೋ ಮರ್ತ್ಯಾನಾಮುಪಕಾರಕೃತ್ ।
ತಥಾ ಹಿ ಸುಮಹತ್ತೇಜೋ ನಾಲಂ ಸೋಢುಮಹಂ ತವ ॥ ೨೭ ॥
ತಥಾ ಹಿ ಸುಮಹಾಂಭೋದಧ್ವನಿಧೀರತರಂ ತತಃ ।
ವಾಕ್ಯಂ ತಮಿತಿ ಹೋವಾಚ ಯುಷ್ಮತ್ಪಾದಸುಲಾಲಿತಂ ॥ ೨೮ ॥
ದೇವಾಸುರೇ ಮಹಾಯುದ್ಧೇ ದೈತ್ಯಾಶ್ಚ ಸುಮಹಾಭಟಾಃ ।
ನ ಶೇಕುಸ್ತೇ ಮಹತ್ತೇಜಸ್ತತ್ತೇಜೋ ನ ಸಹಾಮ್ಯಹಂ ॥ ೨೯ ॥

---

೨೫-೨೬. ಆಮಾತು ಜ್ಞಾಪಕಕ್ಕೆ ಬರುತ್ತಲೇ ಸರ್ವೇಶ್ವರನಾದ ಶ್ರೀ ಹರಿಯನ್ನು ನಮಸ್ಕರಿಸಿ ಮುಚುಕುಂದನು ಈರೀತಿ ನುಡಿದನು. ಈಗ ತಿಳಿದೆನು, ವಿಷ್ಣುವಿನ ಅಂಶಾವತಾರನಾದ ಪರಮಪುರುಷನೇ ನೀನು. ಇಪ್ಪತ್ತೆಂಟನೆಯ ಯುಗವಾದ ದ್ವಾಪರದ ಅಂತ್ಯದಲ್ಲಿ ಶ್ರೀಹರಿಯು ಯದುವಂಶದಲ್ಲಿ ಅವತರಿಸುವನೆಂಬುದಾಗಿ ಬಹುಹಿಂದೆಯೇ ಗಾರ್ಗ್ಯಮಹರ್ಷಿಯು ನನಗೆ ತಿಳಿಸಿದ್ದನು.

೨೭. ಆ ಮಾತಿನಂತೆಯೇ ಮರ್ತ್ಯರನ್ನು ಸಲಹುವ ಪರಮಾತ್ಮನಾದ ನೀನೇ ಇಲ್ಲಿಗೆ ಬಂದಿರುವೆ. ಇದರಲ್ಲಿ ಏನೂ ಸಂದೇಹವೇ ಇಲ್ಲವು. ನಿನ್ನೀ ಅತಿಶಯವಾದ ತೇಜಸ್ಸನ್ನು ನಾನು ಸಹಿಸಲಾರೆನು ಎಂದನು.

೨೮. ಬಳಿಕ ಮುಚುಕುಂದನು ವರ್ಷಾಕಾಲದ ಮೇಘದ ಮೊಳಗಿನಂತೆ ತುಂಬಿದ ಗಂಭೀರಧ್ವನಿಯಿಂದ ಕೃಷ್ಣನನ್ನು ಕುರಿತು ಮರಳಿ ಬಿನ್ನವಿಸ ತೊಡಗಿದನು.

೨೯. ಹಿಂದೆ ದೇವತೆಗಳಿಗೂ ಅಸುರರಿಗೂ ನಡೆದ ಭಾರಿ ಯುದ್ಧದಲ್ಲಿ ಮಹಾಭಟರಾದ ದೈತ್ಯವೀರರು ನಿನ್ನ ಮಹತ್ತರವಾದ ತೇಜಸ್ಸನ್ನು ತಡೆಯಲಾರದೆ ಹೋದರು. ಅಂತಹ ತೇಜಸ್ಸನ್ನು ನಾನು ತಾನೇ ಹೇಗೆ ತಡೆಯಲಾಪೆನು ?

**ಸಂಸಾರಪತಿತಸ್ಯೈಕೋ ಜಂತೋಸ್ತ್ವಂ ಶರಣಂ ಪರಂ ।**
**ಸಂಪ್ರಸೀದ ಪ್ರಪನ್ನಾರ್ತಿಹರ್ತಾ ಹರ ಮಮಾಶುಭಂ ॥ ೩೦ ॥**

**ತ್ವಂ ಪಯೋನಿಧಯಃ ಶೈಲಾಃ ಸರಿತಶ್ಚ ವನಾನಿ ಚ ।**
**ಮೇದಿನೀ ಗಗನಂ ವಾಯುರಾಪೋಽಗ್ನಿಸ್ತ್ವಂ ತಥಾ ಪುಮಾನ್ ॥ ೩೧ ॥**

**ಪುಂಸಃ ಪರತರಂ ಸರ್ವಂ ವ್ಯಾಪ್ಯ ಜನ್ಮ ವಿಕಲ್ಪವತ್ ।**
**ಶಬ್ದಾದಿಹೀನಮಜರಂ ವೃದ್ಧಿಕ್ಷಯವಿವರ್ಜಿತಂ ॥ ೩೨ ॥**

**ತ್ವತ್ತೋಽಮರಾಸ್ತು ಪಿತರೋ ಯಕ್ಷಗಂಧರ್ವರಾಕ್ಷಸಾಃ ।**
**ಸಿದ್ಧಾಶ್ಚಾಪ್ಸರಸಸ್ತ್ವತ್ತೋ ಮನುಷ್ಯಾಃ ಪಶವಃ ಖಗಾಃ ॥ ೩೩ ॥**

**ಸರೀಸೃಪಾ ಮೃಗಾಃ ಸರ್ವೇ ತ್ವತ್ತಶ್ಚೈವ ಮಹೀರುಹಾಃ ।**
**ಯಚ್ಚ ಭೂತಂ ಭವಿಷ್ಯದ್ವಾ ಕಿಂಚಿದತ್ರ ಚರಾಚರೇ ॥ ೩೪ ॥**

---

೩೦. ಸಂಸಾರದಲ್ಲಿ ಮುಳುಗಿ ತೊಳಲುತ್ತಿರುವ ಜೀವಿಗೆ ನೀನೊಬ್ಬನೇ ದಿಕ್ಕಲ್ಲದೆ ಮತ್ತಾರೂ ಅಲ್ಲ. ಎಲೈ ಶರಣಾಗತರ ದುಃಖಗಳನ್ನು ಪರಿಹರಿಸುವ ಸ್ವಾಮಿಯೇ, ಪ್ರಸನ್ನನಾಗು. ನನ್ನ ಅಶುಭಗಳಿಲ್ಲವನ್ನೂ ನೀಗು.

೩೧. ಈ ಜಗತ್ತಿನಲ್ಲಿರುವ ಸಾಗರಗಳೂ, ಪರ್ವತಗಳೂ, ಹೊಳೆಗಳೂ ಕಾಡುಗಳೂ ಮತ್ತು ಭೂಮಿಯೂ, ಆಕಾಶವೂ, ವಾಯುವೂ, ನೀರೂ ಬೆಂಕಿಯೂ, ಪುರುಷನೂ ಎಲ್ಲವೂ ನೀನೇ ಆಗಿರುವೆ.

೩೨. ಎಲೈ ಪರಮಪುರುಷನೇ, ನೀನು ಸರ್ವವನ್ನೂ ವ್ಯಾಪಿಸಿಕೊಂಡಿರುವೆ. ನಿನ್ನ ಜನ್ಮವು (ಶರೀರವು) ವಿಕಲ್ಪಾದಿಗಳಿಂದ ವರ್ಜಿತವಾಗಿಯೂ ಉತ್ತಮೋತ್ತಮವಾಗಿಯೂ ಇರುವುದು. ಅದಕ್ಕೆ ಶಬ್ದಾದಿಗಳೂ, ಹುಟ್ಟೂ ಸಾವೂ, ಮುಪ್ಪೂ ಯಾವುದೂ ಇಲ್ಲದಿರುವುದು.

೩೩. ನಿನ್ನಿಂದಲೇ ದೇವತೆಗಳು, ಪಿತೃಗಳು, ಯಕ್ಷರು, ಗಂಧರ್ವರು ರಾಕ್ಷಸರು ಉದ್ಭವಿಸಿರುವರು. ನಿನ್ನಿಂದಲೇ ಸಿದ್ಧರೂ, ಅಪ್ಸರೆಯರೂ, ಮನುಷ್ಯರೂ, ಪಶುಗಳೂ ಉಂಟಾಗಿರುವರು.

೩೪-೩೫. ನಾನಾವಿಧವಾದ ಹಾವುಗಳೂ, ಮೃಗಗಳೂ, ಮತ್ತು ವೃಕ್ಷಗಳೂ ನಿನ್ನಿಂದಲೇ ಆಗಿರುವುವು. ಎಲೈ ಜಗತ್ಕರ್ತನೇ, ಈ ಚರಾಚರಾತ್ಮಕ

ಅಮೂರ್ತಂ ಮೂರ್ತಮಥವಾ ಸ್ಥೂಲಂ ಸೂಕ್ಷ್ಮತರಂ ತಥಾ ।
ತತ್ಸರ್ವಂ ತ್ವಂ ಜಗತ್ಕರ್ತರ್ನಾಸ್ತಿ ಕಿಂಚಿತ್ತ್ವಯಾ ವಿನಾ ॥ ೩೫ ॥

ಮಯಾ ಸಂಸಾರಚಕ್ರೇಽಸ್ಮಿನ್ಭ್ರಮತಾ ಭಗವನ್ಸದಾ ।
ತಾಪತ್ರಯಾಭಿಭೂತೇನ ನ ಪ್ರಾಪ್ತಾ ನಿರ್ವೃತಿಃ ಕ್ವಚಿತ್ ॥ ೩೬ ॥

ದುಃಖಾನ್ಯೇವ ಸುಖಾನೀತಿ ಮೃಗತೃಷ್ಣಾ ಜಲಾಶಯಃ ।
ಮಯಾ ನಾಥ ಗೃಹೀತಾನಿ ತಾನಿ ತಾಪಾಯ ಮೇಽಭವನ್ ॥ ೩೭ ॥

ರಾಜ್ಯಮುರ್ವೀ ಬಲಂ ಕೋಶೋ ಮಿತ್ರಪಕ್ಷಸ್ತಥಾತ್ಮಜಾಃ ।
ಭಾರ್ಯಾ ಭೃತ್ಯಜನಾ ಯೇ ಚ ಶಬ್ದಾದ್ಯಾ ವಿಷಯಾಃ ಪ್ರಭೋ ॥ ೩೮ ॥

---

ವಾದ ಜಗತ್ತಿನಲ್ಲಿ ಇದುವರೆಗೆ ಏನು ಆಗಿರುವುದೋ ಮತ್ತು ಮುಂದೆ ಏನು ನಡೆಯಲಿರುವುದೋ ಅದೆಲ್ಲವೂ ನೀನಲ್ಲದೆ ಬೇರೆಯಲ್ಲ. ಮತ್ತು ಯಾವುದು ಮೂರ್ತವೂ (ಕ್ರಿಯೆಯುಳ್ಳ ವಸ್ತು) ಅಮೂರ್ತವೂ (ಕ್ರಿಯೆಯಿಲ್ಲದವನು) ಆಗಿರುವುದೋ ಮತ್ತು ಯಾವುದು ಸ್ಥೂಲವೂ, ಅತಿಸೂಕ್ಷ್ಮವೂ ಎನಿಸಿರುವುದೋ ಅದೆಲ್ಲವೂ ನಿನ್ನನ್ನು ಬಿಟ್ಟು ಬೇರೆಯಲ್ಲವು.

೩೬. ಎಲೈ ಭಗವಂತನೇ, ನಾನು ಸಂಸಾರದ ಚಕ್ರಕ್ಕೆ ಸಿಕ್ಕಿಬಿದ್ದು ಬಹುದಿನಗಳಿಂದಲೂ ಆಶೆಗಳಿಗೆ ಸಿಕ್ಕಿ ವಿಚ್ಛಿತ್ತಿಯಿಲ್ಲದೆ ತೊಳಲುತ್ತಿರುವೆನು. ನನ್ನನ್ನು ಆಧ್ಯಾತ್ಮಿಕ, ಆಧಿದೈವಿಕ, ಆದಿಭೌತಿಕಗಳೆಂಬ ತ್ರಿವಿಧ ತಾಪಗಳು ಪೀಡಿಸುತ್ತಿರುವುವು. ಇಂತಹ ನನಗೆ ನೆಮ್ಮದಿಯೆಂಬುದು ಎಲ್ಲಿಯೂ ದೊರೆಯಲಿಲ್ಲವು.

೩೭. ಬಿಸಿಲುಕುದುರೆಯನ್ನೇ ನೀರಿನ ಆಸರೆಯೆಂದು ಬಗೆದ ನಾನು ದುಃಖಗಳನ್ನೇ ಸುಖಗಳೆಂದು ಭ್ರಮಿಸಿ ಅವುಗಳನ್ನು ಆಸೆಪಟ್ಟು ಸ್ವೀಕಸಿದೆನು. ಆ ದುಃಖಗಳೇ ಈಗ ನನ್ನನ್ನು ಪೀಡಿಸತೊಡಗಿರುವುವು.

೩೮–೩೯. ಎಲೈ ನಾಶರಹಿತನಾದ ಪ್ರಭುವೇ, ಓ ದೇವೇಶ್ವರ, ಈ ರಾಜ್ಯ, ದೇಶ, ಕೋಶಗಳು ಸೈನ್ಯ, ಸ್ನೇಹಿತರು, ಮಕ್ಕಳು ಮಡದಿಯರು ಮತ್ತು

ಸುಖಬುದ್ಧ್ಯಾ ಮಯಾ ಸರ್ವಂ ಗೃಹೀತಮಿದಮವ್ಯಯ ।
ಪರಿಣಾಮೇ ಚ ದೇವೇಶ ತಾಪಾತ್ಮಕಮಭೂನ್ಮಮ ॥ ३९ ॥

ದೇವಲೋಕಗತಿಂ ಪ್ರಾಪ್ತೋ ನಾಥ ದೇವಗಣೋಽಪಿ ಹಿ ।
ಮತ್ತಃ ಸಾಹಾಯ್ಯಕಾಮೋಭೂಚ್ಛಾಶ್ವತೀ ಕುತ್ರ ನಿರ್ವೃತಿಃ ॥ ೪೦ ॥

ತ್ವಾಮನಾರಾಧ್ಯ ಜಗತಾಂ ಸರ್ವೇಷಾಂ ಪ್ರಭವಾಸ್ಪದಂ ।
ಶಾಶ್ವತೀ ಪ್ರಾಪ್ಯತೇ ಕೇನ ಪರಮೇಶ್ವರ ನಿರ್ವೃತಿಃ ॥ ೪೧ ॥

ತ್ವನ್ಮಾಯಾಮೂಢಮನಸೋ ಜನ್ಮಮೃತ್ಯುಜರಾದಿಕಾನ್ ।
ಅವಾಪ್ಯ ಪಾಪಾನ್ಪಶ್ಯಂತಿ ಪ್ರೇತರಾಜಾನಮಂತರಾ ॥ ೪೨ ॥

ತತಃ ಪಾಶಶತೈರ್ಬದ್ಧಾ ನರಕೇಷ್ವತಿದಾರುಣಂ ।
ಪ್ರಾಪ್ನುವಂತಿ ಮಹದ್ದುಃಖಂ ವಿಶ್ವರೂಪಮಿದಂ ತವ ॥ ೪೩ ॥

---

ಶಬ್ದಾದಿ ವಿಷಯಗಳು ಇವೆಲ್ಲವನ್ನೂ ನಾನು ಸುಖಹೇತುವೆಂದು ಭ್ರಮಿಸಿ ಸ್ವೀಕರಿಸಿದೆನು. ಆದರೆ ಇವೆಲ್ಲವೂ ಕೊನೆಯಲ್ಲಿ ನನಗೆ ತಾಪವನ್ನೇ ಮಾಡುತ್ತಿವೆ.

೪೦. ಎಲೈ ಸ್ವಾಮಿಯೇ, ದೇವಲೋಕವನ್ನು ಸೇರಿ ದೇವತ್ವವನ್ನು ಪಡೆದಿದ್ದರೂ ಸಹ ದೇವತೆಗಳು ನನ್ನಿಂದ ಸಹಾಯವನ್ನು ಅಪೇಕ್ಷಿಸಿದರು. ಯಾರಿಗೆ ತಾನೇ ಶಾಶ್ವತವಾದ ಸುಖವು ಲಭಿಸಿರುವುದು ?

೪೧. ಹೇ ಪರಮೇಶ್ವರ, ಎಲ್ಲ ಜಗತ್ತುಗಳೂ ಸೃಷ್ಟಿಯಾಗಲು ಯಾರು ಕಾರಣವೆನಿಸುವನೋ ಅಂತಹ ನಿನ್ನನ್ನು ಸೇವಿಸದೆ ಯಾವನು ತಾನೇ ಶಾಶ್ವತವಾದ ಸುಖವನ್ನು ಪಡೆದಾನು ?

೪೨. ನಿನ್ನ ಮಾಯೆಗೆ ಸಿಲುಕಿ ಮೋಹಪರವಶವಾದ ಮನಸ್ಸುಳ್ಳ ಜೀವಿಗಳು ಹುಟ್ಟು, ಸಾವು, ಮುಪ್ಪುಗಳನ್ನು ಅನುಭವಿಸಿ ಕೊನೆಗೆ ಯಮನನ್ನು ಸಂದರ್ಶಿಸುವರು.

೪೩. ಬಳಿಕ ನೂರಾರು ಪಾಶಗಳಿಂದ ಬಿಗಿಯಲ್ಪಟ್ಟವರಾಗಿ ನಾನಾ ವಿಧವಾದ ನರಕಗಳಲ್ಲಿ ಸಹಿಸಲಸಾಧ್ಯವಾದ ಬಹು ದುಃಖವನ್ನು ಅನುಭವಿಸುವರು. ಇವೆಲ್ಲವೂ ನಿನ್ನ ವಿಶ್ವರೂಪವೇ ಸರಿ.

ಅಹಮತ್ಯಂತವಿಷಯೀ ಮೋಹಿತಸ್ತವ ಮಾಯಯಾ ।
ಮಮತ್ವಾಗಾಧಗರ್ತಾಂತೇ ಭ್ರಮಾಮಿ ಪರಮೇಶ್ವರ ॥ ೪೪ ॥

ಸೋಽಹಂ ತ್ವಾಂ ಶರಣಮಪಾರಮೀಶಮೀಡ್ಯಂ
ಸಂಪ್ರಾಪ್ತಃ ಪರಮಪದಂ ಯತೋ ನ ಕಿಂಚಿತ್ ।
ಸಂಸಾರಶ್ರಮಪರಿತಾಪತಪ್ತಚೇತಾ
ನಿರ್ವಿಣ್ಣೇ ಪರಿಣತಧಾಮ್ನಿ ಸಾಭಿಲಾಷಃ ॥ ೪೫ ॥

ಇತಿ ಶ್ರೀಮಹಾಪುರಾಣೇ ಆದಿಬ್ರಾಹ್ಮೇ ಕಾಲಯವನವಧೇ ಮುಚುಕುಂದಸ್ತುತಿನಿರೂಪಣಂ ನಾಮ ಷಣ್ಣವತ್ಯಧಿಕಶತತಮೋಽಧ್ಯಾಯಃ

---

೪೪. ಎಲೈ ಪರಮೇಶ್ವರನೇ, ನಾನು ಬಹುವಾಗಿ ವಿಷಯಸುಖಗಳಲ್ಲಿಯೇ ಆಸಕ್ತನಾಗಿರುವೆನು. ನಿನ್ನ ಮಾಯೆಯಿಂದ ಮೋಹಿತನಾಗಿ ಮಮತ್ವ (ನನ್ನದು) ವೆಂಬ ಭಾರಿಸುಳಿಯಲ್ಲಿ ಸಿಕ್ಕಿ ತೊಳಲುತ್ತಿರುತ್ತೇನೆ.

೪೫. ಯಾವನಿಗಿಂತಲೂ ಶ್ರೇಷ್ಠವಾದ ಮತ್ತೊಂದು ವಸ್ತುವು ಇಲ್ಲದಿರುವುದೋ, ಅಂತಹ ಎಲ್ಲೆಯಿಲ್ಲದವನೂ, ಪ್ರಭುವೂ, ಸ್ತೋತ್ರಾರ್ಹನೂ ಆದ ನಿನ್ನನ್ನು ನಾನೀಗ ಮರೆಹೊಕ್ಕಿರುವೆನು. ಈ ಸಂಸಾರದಲ್ಲಿ ತೊಳಲಿ ತೊಳಲಿ ಆದರಿಂಮಂಟಾದ ಶ್ರಮದಿಂದ ದುಃಖಿತನಾದ ನಾನು, ಪ್ರಶಾಂತವೂ ಪರಿಣತವೂ ಆದ ತೇಜಸ್ಸಿನಲ್ಲಿ ಅಭಿಲಾಷೆಯುಳ್ಳವನಾಗಿರುವೆನು, ಎಂದು ಸ್ತುತಿಸಿದನು.

ಇಲ್ಲಿಗೆ ಶ್ರೀಬ್ರಹ್ಮಪುರಾಣದಲ್ಲಿ ಮುಚುಕುಂದಸ್ತುತಿನಿರೂಪಣವೆಂಬ ನೂರತೊಂಭತ್ತಾರನೆಯ ಅಧ್ಯಾಯವು ಮುಗಿದುದು.

---

ಶ್ರೀಃ

ಓಂ ತತ್ಸದ್ಬ್ರಹ್ಮಣೇ ನಮಃ

# ಅಥ ಬ್ರಾಹ್ಮೇ ಮಹಾಪುರಾಣೇ

## ಸಪ್ತನವತ್ಯಧಿಕಶತತಮೋऽಧ್ಯಾಯಃ

॥ ವ್ಯಾಸ ಉವಾಚ ॥

ಇತ್ಥಂ ಸ್ತುತಸ್ತದಾ ತೇನ ಮುಚುಕುಂದೇನ ಧೀಮತಾ ।
ಪ್ರಾಹೇಶಃ ಸರ್ವಭೂತಾನಾಮನಾದಿನಿಧನೋ ಹರಿಃ ॥ ೧ ॥

॥ ಶ್ರೀಕೃಷ್ಣ ಉವಾಚ ॥

ಯಥಾಭಿವಾಞ್ಛಿತಾಂಲ್ಲೋಕಾನ್ದಿವ್ಯಾನ್ಗಚ್ಛ ನರೇಶ್ವರ ।
ಅವ್ಯಾಹತಪರೈಶ್ವರ್ಯೋ ಮತ್ಪ್ರಸಾದೋಪಬೃಂಹಿತಃ ॥ ೨ ॥

ಭುಕ್ತ್ವಾ ದಿವ್ಯಾನ್ಮಹಾಭೋಗಾನ್ಭವಿಷ್ಯಸಿ ಮಹಾಕುಲೇ ।
ಜಾತಿಸ್ಮರೋ ಮತ್ಪ್ರಸಾದಾತ್ತತೋ ಮೋಕ್ಷಮವಾಪ್ಸ್ಯಸಿ ॥ ೩ ॥

---

### ನೂರತೊಂಭತ್ತೇಳನೆಯ ಅಧ್ಯಾಯವು

೧. ವ್ಯಾಸನು ಹೇಳತೊಡಗಿದನು :—ಈರೀತಿಯಾಗಿ ಜ್ಞಾನಿಯಾದ ಆ ಮುಚುಕುಂದನು ಸ್ತೋತ್ರಮಾಡಲಾಗಿ, ಸಕಲಪ್ರಾಣಿಗಳಿಗೂ ಅಧಿಪತಿಯೂ, ಹುಟ್ಟುಸಾವುಗಳಿಲ್ಲದವನೂ ಆದ ಶ್ರೀಕೃಷ್ಣನು ಈರೀತಿ ಹೇಳಿದನು.

೨-೩. "ಎಲೈ ಮುಚುಕುಂದನೇ, ನನ್ನ ಅನುಗ್ರಹದ ಬಲದಿಂದ, ನೀನು, ನಿನಗೆ ಅಪೇಕ್ಷಿತವಾದ ದಿವ್ಯಲೋಕಗಳನ್ನೆಲ್ಲಾ ಹೊಂದುವವನಾಗು. ಅಲ್ಲೆಲ್ಲಾ ನಿನ್ನ ಐಶ್ವರ್ಯವನ್ನು ತಡೆಯಿಲ್ಲದಂತೆ ಅನುಭವಿಸು. ಹಾಗೆ ನೀನು ಆ ದೇವಲೋಕದ ಮಹಾ ಭೋಗಭಾಗ್ಯಗಳನ್ನೆಲ್ಲಾ ಅನುಭವಿಸಿ, ಕೊನೆಗೆ ಉತ್ತಮವಾದ ವಂಶವೊಂದರಲ್ಲಿ ಹುಟ್ಟುತ್ತೀಯೆ. ಆಗ ನಿನಗೆ ಹಿಂದಿನ ಜನ್ಮಗಳ ನೆನಪು ಇರುವುದು. ಅನಂತರ ನೀನು ಮೋಕ್ಷವನ್ನು ಪಡೆಯುವೆ."

॥ ವ್ಯಾಸ ಉವಾಚ ॥

ಇತ್ಯುಕ್ತಃ ಪ್ರಣಿಪತ್ಯೇಶಂ ಜಗತಾಮುಚ್ಯುತಂ ನೃಪಃ ।
ಗುಹಾಮುಖಾದ್ವಿನಿಷ್ಕ್ರಾಂತೋ ದದೃಶೇ ಸೋಽಲ್ಪಕಾನ್ನರಾನ್ ॥ ೪ ॥

ತತಃ ಕಲಿಯುಗಂ ಜ್ಞಾತ್ವಾ ಪ್ರಾಪ್ತಂ ತಪ್ತುಂ ತತೋ ನೃಪಃ ।
ನರನಾರಾಯಣಸ್ಥಾನಂ ಪ್ರಯಯೌ ಗಂಧಮಾದನಂ ॥ ೫ ॥

ಕೃಷ್ಣೋಽಪಿ ಘಾತಯಿತ್ವಾರಿಮುಪಾಯೇನ ಹಿ ತದ್ಬಲಂ ।
ಜಗ್ರಾಹ ಮಥುರಾಮೇತ್ಯ ಹಸ್ತ್ಯಶ್ವಸ್ಯಂದನೋಜ್ಜ್ವಲಂ ॥ ೬ ॥

ಆನೀಯ ಚೋಗ್ರಸೇನಾಯ ದ್ವಾರವತ್ಯಾಂ ನ್ಯವೇದಯತ್ ।
ಪರಾಭಿಭವನಿಃಶಂಕಂ ಬಭೂವ ಚ ಯದೋಃ ಕುಲಂ ॥ ೭ ॥

---

೪. ಈರೀತಿಯಾಗಿ ಕೃಷ್ಣನು ನುಡಿದುದನ್ನು ಕೇಳಿ ಮುಚುಕುಂದನು ಜಗತ್ಪ್ರಭುವಾದ ಆತನನ್ನು ನಮಸ್ಕರಿಸಿ, ಗುಹೆಯಿಂದ ಹೊರಗೆ ಬಂದನು. ಆಗ ಅವನ ಕಣ್ಣಿಗೆ ಗಿಡ್ಡರಾದ ಮನುಷ್ಯರು ಕಾಣಿಸಿದರು.

೫. ಆಗ ನರಪತಿಯು ಕಲಿಯುಗವು ಪ್ರಾಪ್ತವಾಯಿತೆಂದು ತಿಳಿದು, ನರನಾರಾಯಣರಿಗೆ ನಿವಾಸವೆನಿಸಿದ ಗಂಧಮಾದನಪರ್ವತಕ್ಕೆ ತಪಸ್ಸು ಮಾಡುವುದಕ್ಕಾಗಿ ತೆರಳಿದನು.

೬–೭. ಈರೀತಿ ಕೃಷ್ಣನು ತನ್ನ ಶತ್ರುವನ್ನು ಉಪಾಯವಾಗಿ ಕೊಲ್ಲಿಸಿ ಮಥುರೆಗೆ ಬಂದು ಅಲ್ಲಿದ್ದ ಕಾಲಯವನನ, ಆನೆ, ಕುದುರೆ, ತೇರುಗಳಿಂದ ಸಜ್ಜಾಗಿದ್ದ ಸೇನೆಯೆಲ್ಲವನ್ನೂ ವಶಪಡಿಸಿಕೊಂಡನು. ಬಳಿಕ ಸೇನೆಯೊಡನೆ ದ್ವಾರಕೆಗೆ ಬಂದು ಪ್ರಭುವಾದ ಉಗ್ರಸೇನನಿಗೆ ಅದನ್ನು ಒಪ್ಪಿಸಿಬಿಟ್ಟನು. ಇದರಿಂದ ಯಾದವರು ಶತ್ರುಗಳು ತಮ್ಮನ್ನು ಸೋಲಿಸುವರೆಂಬ ಭೀತಿಯನ್ನೇ ತೊರೆದು ಸುಖದಿಂದ ಇದ್ದರು.

**ಬಲದೇವೋऽಪಿ ವಿಪ್ರೇಂದ್ರಾಃ ಪ್ರಶಾಂತಾಖಿಲವಿಗ್ರಹಃ ।**
**ಜ್ಞಾತಿದರ್ಶನಸೋತ್ಕಂಠಃ ಪ್ರಯಯೌ ನಂದಗೋಕುಲಂ ॥ ೮ ॥**

**ತತೋ ಗೋಪಾಶ್ಚ ಗೋಪ್ಯಶ್ಚ ಯಥಾಪೂರ್ವಮಮಿತ್ರಜಿತ್ ।**
**ತಥೈವಾಭ್ಯವದತ್ಪ್ರೇಮ್ಣಾ ಬಹುಮಾನಪುರಃಸರಂ ॥ ೯ ॥**

**ಕೈಶ್ಚಾಪಿ ಸಂಪರಿಷ್ವಕ್ತಃ ಕಾಂಶ್ಚಿತ್ಸ ಪರಿಷಸ್ವಜೇ ।**
**ಹಾಸಂ ಚಕ್ರೇ ಸಮಂ ಕೈಶ್ಚಿದ್ಗೋಪಗೋಪೀಜನೈಸ್ತಥಾ ॥ ೧೦ ॥**

**ಪ್ರಿಯಾಣ್ಯನೇಕಾನ್ಯವದನ್ಗೋಪಾಸ್ತತ್ರ ಹಲಾಯುಧಂ ।**
**ಗೋಪ್ಯಶ್ಚ ಪ್ರೇಮಮುದಿತಾಃ ಪ್ರೋಚುಃ ಸೇರ್ಷ್ಯಮಥಾಪರಾಃ ॥ ೧೧ ॥**

---

೮. ಎಲೈ ದ್ವಿಜೋತ್ತಮರೇ, ಬಳಿಕ ಬಲರಾಮನು ಯುದ್ಧವೆಲ್ಲವೂ ಮುಗಿದುಹೋಗಲು, ಜ್ಞಾತಿಗಳನ್ನೆಲ್ಲಾ (ಬಂಧುಗಳನ್ನು) ನೋಡಿಕೊಂಡು ಬರಬೇಕೆಂಬ ಕುತೂಹಲದಿಂದ ನಂದನ ನಿವಾಸವಾದ ಗೋಕುಲಕ್ಕೆ ತೆರಳಿದನು.

೯. ಆಗ ಗೋಪರೂ ಗೋಪಿಯರೂ ಮೊದಲಿನಂತೆ ಇವನನ್ನು ನೋಡಲು ಬಂದು ಕಿಕ್ಕಿರಿದು ನಿಂತರು. ಆಗ ಶತ್ರುಸೂದನನಾದ, ಬಲರಾಮನು ಪ್ರೀತಿಯಿಂದಲೂ ಬಹುಮಾನದಿಂದಲೂ ಅವರನ್ನು ಮಾತನಾಡಿಸಿದನು.

೧೦. ಅವರಲ್ಲಿ ಕೆಲವರು ಈ ಬಲರಾಮನನ್ನು ಆಲಂಗಿಸಿದರು. ಅವರನ್ನು ಇವನೂ ಪ್ರತಿಯಾಗಿ ಆಲಿಂಗಿಸಿದನು. ಮತ್ತು ಕೆಲವು ಗೋಪಗೋಪಿಯರೊಡನೆ ನಗುನಗುತ್ತಾ ವಿನೋದವಾಗಿದ್ದನು.

೧೧. ಆಗ ಅಲ್ಲಿದ್ದ ಗೋಪರು ಬಲರಾಮನೊಡನೆ ಅನೇಕವಾದ ಪ್ರಿಯವಾಕ್ಯಗಳನ್ನಾಡಿದರು. ಗೋಪಿಯರೂ ಕೂಡ ಆತನಲ್ಲಿ ತಮಗಿದ್ದ ಪ್ರೀತಿಯಿಂದ ಹರ್ಷಿತರಾಗಿ ನಾನಾಮಾತುಗಳನ್ನು ಆಡಿದರು. ಮತ್ತೆ ಕೆಲ ಗೋಪಿಯರು ಪ್ರಣಯಕೋಪವನ್ನು ತೋರ್ಪಡಿಸುತ್ತಾ ಮಾತನಾಡಿದರು.

ಗೋಪ್ಯಃ ಪಪ್ರಚ್ಛುರಪರಾ ನಾಗರೀಜನವಲ್ಲಭಃ ।
ಕಚ್ಚಿದಾಸ್ತೇ ಸುಖಂ ಕೃಷ್ಣಶ್ಚಲತ್ಪ್ರೇಮರಸಾಕುಲಃ ॥ ೧೨ ॥

ಅಸ್ಮಚ್ಚೇಷ್ಟೋಪಹಸನಂ ನ ಕಚ್ಚಿತ್ಪುರಯೋಷಿತಾಂ ।
ಸೌಭಾಗ್ಯಮಾನಮಧಿಕಂ ಕರೋತಿ ಕ್ಷಣಸೌಹೃದಃ ॥ ೧೩ ॥

ಕಚ್ಚಿತ್ಸ್ಮರತಿ ನಃ ಕೃಷ್ಣೋ ಗೀತಾನುಗಮನಂ ಕೃತಂ ।
ಅಪ್ಯಸೌ ಮಾತರಂ ದ್ರಷ್ಟುಂ ಸಕೃದಪ್ಯಾಗಮಿಷ್ಯತಿ ॥ ೧೪ ॥

ಅಥವಾ ಕಿಂ ತದಾಲಾಪೈಃ ಕ್ರಿಯಂತಾಮಪರಾಃ ಕಥಾಃ ।
ಯದಸ್ಮಾಭಿರ್ವಿನಾ ತೇನ ವಿನಾಸ್ಮಾಕಂ ಭವಿಷ್ಯತಿ ॥ ೧೫ ॥

---

೧೨. ಆಗ ಕೆಲಮಂದಿ ಇತರ ಗೋಪಿಯರು ಬಲರಾಮನನ್ನು ಕುರಿತು ಕೃಷ್ಣನ ವಿಚಾರವಾಗಿ ಪ್ರಶ್ನಿಸಿದರು. ಚಂಚಲವಾದ ಪ್ರೇಮವುಳ್ಳವನೂ, ಪುರಾಂಗನೆಯರ ಪ್ರೀತಿಗೆ ಪಾತ್ರನಾದವನೂ ಆದ ಶ್ರೀಕೃಷ್ಣನು ಕ್ಷೇಮದಿಂದ ಇರುವನೇ ?

೧೩. ಆ ಕ್ಷಣಿಕವಾದ ಪ್ರೇಮವುಳ್ಳ ಕೃಷ್ಣನು ಆ ನಗರದ ಸುಂದರಿಯರ ಮುಂದೆ ನಮ್ಮ ನಡೆನುಡಿಗಳನ್ನು ಆಡಿಕೊಳ್ಳುತ್ತಾ, ಅವರ ಮನಸ್ಸಿನಲ್ಲಿರುವ, ನಾವೇ ಸೌಭಾಗ್ಯಶಾಲಿಗಳೆಂಬ ಹೆಮ್ಮೆಯನ್ನು ಹೆಚ್ಚಿಸುತ್ತಿಲ್ಲವಷ್ಟೆ ?

೧೪. ನಾವೆಲ್ಲರೂ ಆತನ ಗೀತಧ್ವನಿಯನ್ನೇ ಹಿಂಬಾಲಿಸುತ್ತಾ ಬಂದುಬಿಟ್ಟುದನ್ನು ಯಾವಾಗಲಾದರೂ ಸ್ಮರಿಸುವನೇ! ತನ್ನ ತಾಯಿಯಾದ ಯಶೋದೆಯನ್ನು ನೋಡುವುದಕ್ಕೋಸ್ಕರವಾಗಿಯಾದರೂ ಒಂದುಸಲ ಇತ್ತ ಕಡೆ ಬಂದಾನೇ ?

೧೫. ಅಥವಾ, ಇನ್ನೇಕೆ ಅವನಿಗೆ ಸಂಬಂಧಪಟ್ಟ ಮಾತುಗಳು ? ಬೇರೆ ಯಾವುದಾದರೂ ಮಾತುಗಳನ್ನಾಡಿರಿ. ಅವನಿಗೆ ನಮ್ಮಿಂದ ಆಗಬೇಕಾದುದೇನಿದೆ ? ಅವನಿಂದತಾನೇ ನಮಗೆ ಏನಾಗಬೇಕಾಗಿದೆ ?

ಪಿತಾ ಮಾತಾ ತಥಾ ಭ್ರಾತಾ ಭರ್ತಾ ಬಂಧುಜನಶ್ಚ ಕಃ ।
ನ ತ್ಯಕ್ತಸ್ತತ್ಕೃತೇऽಸ್ಮಾಭಿರಕೃತಜ್ಞಸ್ತತೋ ಹಿ ಸಃ ॥ ೧೬ ॥

ತಥಾಪಿ ಕಚ್ಚಿದಾತ್ಮೀಯಮಿಹಾಗಮನಸಂಶ್ರಯಂ ।
ಕರೋತಿ ಕೃಷ್ಣೋ ವಕ್ತವ್ಯಂ ಭವತಾ ವಚನಾಮೃತಂ ॥ ೧೭ ॥

ದಾಮೋದರೋऽಸೌ ಗೋವಿಂದಃ ಪುರಸ್ತ್ರೀಸಕ್ತಮಾನಸಃ ।
ಅಪೇತಪ್ರೀತಿರಸ್ಮಾಸು ದುರ್ದರ್ಶಃ ಪ್ರತಿಭಾತಿ ನಃ ॥ ೧೮ ॥

॥ ವ್ಯಾಸ ಉವಾಚ ॥
ಆಮಂತ್ರಿತಃ ಸ ಕೃಷ್ಣೇತಿ ಪುನರ್ದಾಮೋದರೇತಿ ಚ ।
ಜಹಸುಃ ಸುಸ್ವರಂ ಗೋಪ್ಯೋ ಹರಿಣಾ ಕೃಷ್ಟಚೇತಸಃ ॥ ೧೯ ॥

---

೧೬. ಅವನಿಗೋಸ್ಕರವಾಗಿ, ತಂದೆ, ತಾಯಿ, ಅಣ್ಣ, ಗಂಡ, ಬಂಧುಗಳು, ಇವರಲ್ಲಿ ಯಾರನ್ನು ತಾನೇ ನಾವು ಆಗ ತ್ಯಜಿಸಿ ಬರಲಿಲ್ಲ? ಇಷ್ಟಾದರೂ ಅವನಿಗೆ ಅದು ನೆನಪಿಲ್ಲದಿರುವುದು, ಅವನು ಕೃತಜ್ಞನಲ್ಲವೆಂಬುದನ್ನು ತೋರ್ಪಡಿಸುವುದು.

೧೭. ಆದರೂ ಇರಲಿ, ಆ ಕೃಷ್ಣನು ತಾನು ಇಲ್ಲಿಗೆ ಬರುವೆನೆಂಬುದಾಗಿ, ಅಮೃತದಂತಹ ವಚನದಿಂದ ಕೂಡಿದ ಸಂದೇಶವನ್ನಾದರೂ ನಿನ್ನೊಂದಿಗೆ ಹೇಳಿ ಕಳುಹಿಸಿರುವನೇ?

೧೮. ಆ ದಾಮೋದರನು ನಗರಾಂಗನೆಯರಲ್ಲೇ ಮನಸ್ಸು ನೆಟ್ಟು ಹೋದವನಾಗಿ ನಮ್ಮಲ್ಲಿ ಪ್ರೀತಿಯನ್ನು ತೊರೆದುಬಿಟ್ಟಿರುವನು. ಆದ್ದರಿಂದಲೇ ಅವನು ನಮ್ಮ ಕಣ್ಣಿಗೆ ಬೀಳಲಾರನೆಂದು ನಮಗೆ ತೋರುವುದು.

೧೯. ಎಲೈ ಬ್ರಾಹ್ಮಣೋತ್ತಮರೇ! ಈರೀತಿಯಾಗಿ ಶ್ರೀಕೃಷ್ಣನಿಂದ ಅಪಹೃತವಾದ ಮನಸ್ಸುಳ್ಳ ಗೋಪಾಂಗನೆಯರು ಪ್ರೇಮೋನ್ಮಾದದಿಂದ ಪರವಶರಾಗಿ, ಇಂಪಾದ ದನಿಯಲ್ಲಿ ನಗುತ್ತಾ ಒಮ್ಮೆ ಕೃಷ್ಣನೆಂತಲೂ, ಇನ್ನೊಮ್ಮೆ ದಾಮೋದರನೆಂಬುದಾಗಿಯೂ, ಕೂಗಿ ಕರೆಯುತ್ತಿದ್ದರು.

**ಸಂದೇಶೈಃ ಸೌಮ್ಯಮಧುರೈಃ ಪ್ರೇಮಗರ್ಭೈರಗರ್ವಿತೈಃ ।**
**ರಾಮೇಣಾಶ್ವಾಸಿತಾ ಗೋಪ್ಯಃ ಕೃಷ್ಣಸ್ಯಾತಿಮಧುಸ್ವರೈಃ ॥ ೨೦ ॥**

**ಗೋಪೈಶ್ಚ ಪೂರ್ವವದ್ರಾಮಃ ಪರಿಹಾಸಮನೋಹರೈಃ ।**
**ಕಥಾಶ್ಚಕಾರ ಪ್ರೇಮ್ಣಾ ಚ ಸಹ ತೈರ್ವ್ರಜಭೂಮಿಷು ॥ ೨೧ ॥**

**ಇತಿ ಶ್ರೀಮಹಾಪುರಾಣೇ ಆದಿಬ್ರಾಹ್ಮೇ ಗೋಕುಲೇ ಬಲಪ್ರತ್ಯಾ-ಗಮನವರ್ಣನಂ ನಾಮ ಸಪ್ತನವತ್ಯಧಿಕಶತತಮೋಽಧ್ಯಾಯಃ**

---

೨೦. ಆಗ ಬಲರಾಮನು, ಸೌಮ್ಯವಾಗಿಯೂ, ಇಂಪಾಗಿಯೂ, ಪ್ರೇಮಪೂರಿತವಾಗಿಯೂ, ಹೆಮ್ಮೆಯ ಸಂಪರ್ಕವಿಲ್ಲದೆಯೂ ಇರುವಂತಹ ಕೃಷ್ಣನ ಸಂದೇಶವಾಕ್ಯಗಳಿಂದ ಗೋಪಿಯರನ್ನು ಮೆಲುನುಡಿಯಲ್ಲಿ ಸಂತೈಸಿದನು.

೨೧. ಬಳಿಕ ಹಿಂದಿನಂತೆ ಬಲರಾಮನು ಪರಿಹಾಸದಲ್ಲಿ ಪ್ರಿಯರಾದ ಗೋಪರೊಡನೆ ಗೋಕುಲದಲ್ಲಿ ಪ್ರೀತಿಯಿಂದ ಅನೇಕ ಮಾತುಕತೆಗಳನ್ನಾಡುತ್ತಿದ್ದನು.

ಇಲ್ಲಿಗೆ ಶ್ರೀಬ್ರಹ್ಮಪುರಾಣದಲ್ಲಿ ಬಲಪ್ರತ್ಯಾಗಮನವೆಂಬ
ನೂರತೊಂಭತ್ತೇಳನೆಯ ಅಧ್ಯಾಯವು ಮುಗಿದುದು.



ಶ್ರೀಃ

ಓಂ ತತ್ಸದ್ಬ್ರಹ್ಮಣೇನಮಃ

# ಅಥ ಮಹಾ ಪುರಾಣೇ ಬ್ರಾಹ್ಮೇ

## ಅಷ್ಟನವತ್ಯಧಿಕಶತತಮೋಽಧ್ಯಾಯಃ

॥ ವ್ಯಾಸ ಉವಾಚ ॥

ವನೇ ವಿಹರತಸ್ತಸ್ಯ ಸಹ ಗೋಪೈರ್ಮಹಾತ್ಮನಃ ।
ಮಾನುಷಚ್ಛದ್ಮರೂಪಸ್ಯ ಶೇಷಸ್ಯ ಧರಣೀಭೃತಃ ॥ ೧ ॥

ನಿಷ್ಪಾದಿತೋರುಕಾರ್ಯಸ್ಯ ಕಾರ್ಯೇಣೈವಾವತಾರಿಣಃ ।
ಉಪಭೋಗಾರ್ಥಮತ್ಯರ್ಥಂ ವರುಣಃ ಪ್ರಾಹ ವಾರುಣೀಂ ॥ ೨ ॥

### ನೂರತೊಂಭತ್ತೆಂಟನೆಯ ಅಧ್ಯಾಯವು

೧–೨. ಮಹಾತ್ಮನಾದ ಬಲರಾಮನು ಗೋಪಾಲಕರೊಡನೆ ಗೋಕುಲದ ಬಳಿಯ ವನದಲ್ಲಿ ವಿಹರಿಸುತ್ತಿದ್ದನು. ಆ ಬಲರಾಮನು ಮತ್ತಾರೂ ಅಲ್ಲ. ಭೂಮಿಯ ಭಾರವನ್ನು ಇಳಿಸುವ ಸಲುವಾಗಿ ಮನುಷ್ಯರೂಪದಲ್ಲಿ ಅವತರಿಸಿರುವ, ತನ್ನ ತಲೆಯಮೇಲೆ ಭೂಮಿಯನ್ನು ಹೊತ್ತಿರುವ ಸಾಕ್ಷಾದಾದಿಶೇಷನೇ ಅವನು. ಅವನು ತನ್ನ ಅವತಾರದ ಉದ್ದೇಶದಂತೆ ಇದುವರೆಗೆ ಅನೇಕ ಕೆಲಸಗಳನ್ನು ನೆರವೇರಿಸಿದ್ದನು. ಈ ಬಲರಾಮನು ಸಂತೋಷವಾಗಿ ಅನುಭವಿಸುವ ಸಲುವಾಗಿ, ವರುಣನು ಮದಿರೇ (ಮದ್ಯ) ಯನ್ನು ಕುರಿತು ಈರೀತಿ ನುಡಿದನು.

॥ ವರುಣ ಉವಾಚ ॥

ಅಭೀಷ್ಟಾಸಿ ಸರ್ವದಾ ಹ್ಯಸ್ಯ ಮದಿರೇ ತ್ವಂ ಮಹೌಜಸಃ ।
ಅನಂತಸ್ಯೋಪಭೋಗಾಯ ತಸ್ಯ ಗಚ್ಛ ಮುದೇ ಶುಭೇ ॥ ೩ ॥

॥ ವ್ಯಾಸ ಉವಾಚ ॥

ಇತ್ಯುಕ್ತಾ ವಾರುಣೀ ತೇನ ಸಂನಿಧಾನಮಥಾಕರೋತ್ ।
ವೃಂದಾವನತಟೋತ್ಪನ್ನಕದಂಬತರುಕೋಟರೇ ॥ ೪ ॥

ವಿಚರನ್ಬಲದೇವೋಽಪಿ ಮದಿರಾಗಂಧಮುದ್ಧತಂ ।
ಆಘ್ರಾಯ ಮದಿರಾಹರ್ಷಮವಾಪಾಥ ಪುರಾತನಂ ॥ ೫ ॥

ತತಃ ಕದಂಬಾತ್ಸಹಸಾ ಮದ್ಯಧಾರಾಂ ಸ ಲಾಂಗಲೀ ।
ಪತಂತೀಂ ವೀಕ್ಷ್ಯ ಮುನಯಃ ಪ್ರಯಯೌ ಪರಮಾಂ ಮುದಂ ॥ ೬ ॥

---

೩. ಎಲೈ ಶುಭಕರಳಾದ ಮದಿರಾದೇವಿಯೇ, ಮಹಾಪರಾಕ್ರಮಶಾಲಿಯಾದ ಈ ಬಲರಾಮನಿಗೆ ನೀನು ಬಹುವಾಗಿ ಇಷ್ಟಳಾಗಿರುವೆ. ಆದುದರಿಂದ, ಅನಂತನ ಉಪಭೋಗಕ್ಕೋಳಗಾಗಿ ಅವನನ್ನು ಸಂತೋಷಪಡಿಸಲು ನೀನು ಅಲ್ಲಿಗೆ ಹೋಗು.

೪. ಎಂಬುದಾಗಿ ವರುಣನಿಂದ ಆಜ್ಞಾಪ್ತಳಾದ ವಾರುಣಿಯು ಬೃಂದಾವನದ ಬಳಿಯಲ್ಲಿದ್ದ ಕದಂಬವೃಕ್ಷದ ಪೊಟರೆಯೊಂದರಲ್ಲಿ ಸನ್ನಿಹಿತಳಾದಳು.

೫. ವೃಂದಾವನದಲ್ಲೇ ಸಂಚರಿಸುತ್ತಾ ಬರುತ್ತಿದ್ದ ಬಲರಾಮನು ಬಹು ಜೋರಾಗಿ ಬರುತ್ತಿದ್ದ ಮದಿರೆಯ ವಾಸನೆಯನ್ನು ಆಘ್ರಾಣಿಸುತ್ತಲೆ. ಮದಿರೆಯನ್ನು ಪಾನಮಾಡಬೇಕೆಂಬುದಾಗಿ ಉತ್ಸುಕತೆಯನ್ನು ತಾಳಿದನು.

೬. ಎಲೈ ಮುನಿಗಳಿರಾ, ಹೀಗೆ ಅವನಿಗೆ ಕುತೂಹಲವಾದೊಡನೆಯೇ ಆ ಕದಂಬವೃಕ್ಷದಿಂದ ತಟ್ಟನೆ ಮದ್ಯಧಾರೆಯು ಹರಿಯತೊಡಗಿತು. ಅದನ್ನು ನೋಡುತ್ತಲೇ ಬಲದೇವನಿಗೆ ಬಹು ಸಂತೋಷವಾಯಿತು.

ಪಪೌ ಚ ಗೋಪಗೋಪೀಭಿಃ ಸಮವೇತೋ ಮುದಾನ್ವಿತಃ ।
ಉಪಗೀಯಮಾನೋ ಲಲಿತಂ ಗೀತವಾದ್ಯವಿಶಾರದೈಃ ॥ ೭ ॥

ಶ್ರಮತೋಽತ್ಯಂತಘರ್ಮಾಂಭಃಕಣಿಕಾಮೌಕ್ತಿಕೋಜ್ಜ್ವಲಃ ।
ಆಗಚ್ಛ ಯಮುನೇ ಸ್ನಾತುಮಿಚ್ಛಾಮೀತ್ಯಾಹ ವಿಹ್ವಲಃ ॥ ೮ ॥

ತಸ್ಯ ವಾಚಂ ನದೀ ಸಾ ತು ಮತ್ತೋಕ್ತಾಮವಮನ್ಯ ವೈ ।
ನಾಜಗಾಮ ತತಃ ಕ್ರುದ್ಧೋ ಹಲಂ ಜಗ್ರಾಹ ಲಾಂಗಲೀ ॥ ೯ ॥

ಗೃಹೀತ್ವಾ ತಾಂ ತಟೇನೈವ ಚಕರ್ಷ ಮದವಿಹ್ವಲಃ ।
ಪಾಪೇ ನಾಯಾಸಿ ನಾಯಾಸಿ ಗಮ್ಯತಾಮಿಚ್ಛಯಾನ್ಯತಃ ॥ ೧೦ ॥

---

೭. ಆಗ ಬಲರಾಮನು ಹಾಡುಗಾರಿಕೆಯಲ್ಲೂ, ವಾದ್ಯಗಳನ್ನು ನುಡಿಸುವುದರಲ್ಲೂ ಕುಶಲರಾದ ಗೋಪಾಲಕರಿಂದ ಮಧುರವಾಗಿ ಸ್ತುತಿಮಾಡುತ್ತಾ, ಗೋಪಾಲಕರೊಡನೆ ಕೂಡಿಕೊಂಡು ಸಂತೋಷವಾಗಿ ಮದಿರೆಯನ್ನು ಸೇವಿಸಿದನು.

೮. ಅನಂತರ ಮದಿರಾಸೇವನೆಯಿಂದ ಉಂಟಾದ ಮತ್ತಿನಿಂದಲೂ ಶ್ರಮದಿಂದಲೂ ಬಲದೇವನ ಮೈಮೇಲೆಲ್ಲಾ ಮುತ್ತಿನ ಸಾಲಿನಂತೆ ಬೆವರಿನ ಹನಿಗಳು ಕಾಣಿಸತೊಡಗಿದುವು. ಆಗ ಅವನು ಸ್ನಾನಮಾಡಬೇಕೆಂದು ಬಯಸಿ ಸ್ವಲ್ಪ ದೂರದಲ್ಲಿ ಹರಿಯುತ್ತಿದ್ದ ಯಮುನಾನದಿಯನ್ನು ಕುರಿತು ತನ್ನ ಬಳಿ ಬರುವಂತೆ ಕರೆದನು.

೯. ಹೀಗೆ ಬಲರಾಮನು ತನ್ನನ್ನು ಬಾರೆಂದು ಕರೆಯುತ್ತಲೇ ಆ ಯಮುನೆಯು, ಇದು ಮದ್ಯಪಾನ ಮಾಡಿದವನ ಅಸಂಗತವಾದ ಮಾತೆಂದು ಭಾವಿಸಿ ಅವನ ಮಾತಿನಂತೆ ಬರಲಿಲ್ಲ. ಆಗ ಅವನಿಗೆ ಕೋಪವುಂಟಾಗಿ ತನ್ನ ಹಲಾಯುಧವನ್ನು (ನೇಗಿಲು) ಕೈಗೆ ತೆಗೆದುಕೊಂಡನು.

೧೦. ಈರೀತಿ ಮದ್ಯಪಾನದಿಂದ ಮತ್ತೇರಿ ವಿವೇಕಶೂನ್ಯನಾಗಿದ್ದ ಬಲರಾಮನು, ಆ ಯಮುನೆಯನ್ನು ಕುರಿತು, "ಎಲೌ ಪಾಪಿಷ್ಠಳೇ, ಬರುವುದಿಲ್ಲವೇ! ಬರುವುದಿಲ್ಲವೇ, ನೋಡು, ಈಗ ನೀನು ನನ್ನಿಷ್ಟದಂತೆ ಮತ್ತೊಂದು ಕಡೆ ಹರಿಯಬೇಕಾಗುವುದು" ಎಂದು ಹೇಳುತ್ತಾ ಯಮುನೆಯ ದಡವನ್ನು ಹಲಾಯುಧದಿಂದ ಎಳೆದನು.

**ಸಾ ಕೃಷ್ಣಾ ತೇನ ಸಹಸಾ ಮಾರ್ಗಂ ಸಂತ್ಯಜ್ಯ ನಿಮ್ನಗಾ ।**
**ಯತ್ರಾಸ್ತೇ ಬಲದೇವೋಽಸೌ ಪ್ಲಾವಯಾಮಾಸ ತದ್ವನಂ ॥ ೧೧ ॥**

**ಶರೀರಿಣೀ ತಥೋಪೇತ್ಯ ತ್ರಾಸವಿಹ್ವಲಲೋಚನಾ ।**
**ಪ್ರಸೀದೇತ್ಯಬ್ರವೀದ್ರಾಮಂ ಮುಂಚ ಮಾಂ ಮುಶಲಾಯುಧ ॥ ೧೨ ॥**

**ಸೋಽಬ್ರವೀದವಜಾನಾಸಿ ಮಮ ಶೌರ್ಯಬಲಂ ಯದಿ ।**
**ಸೋಽಹಂ ತ್ವಾಂ ಹಲಪಾತೇನ ನಯಿಷ್ಯಾಮಿ ಸಹಸ್ರಧಾ ॥ ೧೩ ॥**

**॥ ವ್ಯಾಸ ಉವಾಚ ॥**

**ಇತ್ಯುಕ್ತಯಾತಿಸಂತ್ರಸ್ತಸ್ತಯಾ ನದ್ಯಾ ಪ್ರಸಾದಿತಃ ।**
**ಭೂಭಾಗೇ ಪ್ಲಾವಿತೇ ತತ್ರ ಮುಮೋಚ ಯಮುನಾಂ ಬಲಃ ॥ ೧೪ ॥**

---

೧೧. ಹೀಗೆ ಬಲಾತ್ಕಾರವಾಗಿ ಆ ಬಲದೇವನು ತನ್ನನ್ನು ಎಳೆಯುತ್ತಲೇ ಯಮುನೆಯು ತಾನು ಹರಿಯುತ್ತಿದ್ದ ಪಾತ್ರವನ್ನು ಬಿಟ್ಟು ಅವನಿದ್ದ ವನದಲ್ಲಿ ತುಂಬಿ ಹರಿಯತೊಡಗಿತು.

೧೨. ಮತ್ತು ತಾನು (ಮನುಷ್ಯರಂತೆ) ದೇಹವನ್ನು ಧರಿಸಿ ಬಂದು ಹೆದರಿಕೆಯಿಂದ ತೊಳಲುತ್ತಿರುವ ಕಣ್ಣುಗಳನ್ನುಳ್ಳವಳಾಗಿ, ಬಲರಾಮನನ್ನು ಕುರಿತು 'ಓ ಮುಸಲಾಯುಧ! ಪ್ರಸನ್ನನಾಗು, ನನ್ನನ್ನು ಬಿಡು' ಎಂದು ಬೇಡಿದಳು.

೧೩. ಆಗ ಬಲರಾಮನು 'ಎಲೆ ದುಷ್ಟೆ, ನನ್ನ ಪರಾಕ್ರಮವನ್ನು ಅಲ್ಲಗಳೆಯುತ್ತಿದ್ದೆಯಲ್ಲವೆ? ಇದೋ ನೋಡು, ಈ ಹಲಾಯುಧದಿಂದ ಸಾವಿರಾರು ಸೀಳುಗಳಾಗುವಂತೆ ನಿನ್ನನ್ನು ತುಂಡುತುಂಡು ಮಾಡಿಬಿಡುವೆನು' ಎಂದು ನುಡಿಯಲು,

೧೪. ಆ ಯಮುನೆಯು ಬಹುವಾಗಿ ಹೆದರಿ ಅವನನ್ನು ಪ್ರಸನ್ನನಾಗುವಂತೆ ಅನೇಕವಿಧವಾಗಿ ಪ್ರಾರ್ಥಿಸಲು ಆಗ ಅವನು ಯಮುನೆಯು ಬಂದು ತುಂಬಿದ್ದ ಪ್ರದೇಶದಲ್ಲಿ ಹರಿದುಹೋಗುವಂತೆ ಬಿಟ್ಟುಬಿಟ್ಟನು.

ತತಃ ಸ್ನಾತಸ್ಯ ವೈ ಕಾಂತಿರಾಜಗಾಮ ಮಹಾವನೇ ।
ಅವತಂಸೋತ್ಪಲಂ ಚಾರು ಗೃಹೀತ್ವೈಕಂ ಚ ಕುಂಡಲಂ ॥ ೧೫ ॥

ವರುಣಪ್ರಹಿತಾಂ ಚಾಸ್ಮೈ ಮಾಲಾಮಮ್ಲಾನಪಂಕಜಾಂ ।
ಸಮುದ್ರಾರ್ಹೇ ತಥಾ ವಸ್ತ್ರೇ ನೀಲೇ ಲಕ್ಷ್ಮೀರಯಚ್ಛತ ॥ ೧೬ ॥

ಕೃತಾವತಂಸಃ ಸ ತದಾ ಚಾರುಕುಂಡಲಭೂಷಿತಃ ।
ನೀಲಾಂಬರಧರಃ ಸ್ರಗ್ವೀ ಶುಶುಭೇ ಕಾಂತಿಸಂಯುತಃ ॥ ೧೭ ॥

ಇತ್ಥಂ ವಿಭೂಷಿತೋ ರೇಮೇ ತತ್ರ ರಾಮಸ್ತದಾ ವ್ರಜೇ ।
ಮಾಸದ್ವಯೇನ ಯಾತಶ್ಚ ಪುನಃ ಸ ಮಥುರಾಂ ಪುರೀಂ ॥ ೧೮ ॥

---

೧೫-೧೬. ಅನಂತರ ಅವನು ನದಿಯಲ್ಲಿ ಸ್ನಾನಮಾಡಿದನು. ಆಗ ವರುಣನ ಬಳಿಯಿಂದ ಬಂದ ಕಾಂತಿಯೆಂಬುವಳು ಬಲದೇವನ ಉಪಭೋಗಕ್ಕಾಗಿ, ಶಿರಸ್ಸಿನಲ್ಲಿ ಅವತಂಸದಂತೆ ಧರಿಸಲು ಉಚಿತವಾದ ಸುಂದರವಾದ ನೈದಿಲೆ ಹೂವೊಂದನ್ನೂ, ದಿವ್ಯವಾದ ಕರ್ಣಾಭರಣವನ್ನೂ, ಯಾವಾಗಲೂ ಬಾಡದಿರುವಂತಹ ಕಮಲಪುಷ್ಪಗಳಿಂದ ಮಾಡಿದ ಹಾರವನ್ನೂ, ಸೊಗಸಾದ ಅಂಚುಕಟ್ಟಿನಿಂದ ಕೂಡಿ ಮೆರೆಯುತ್ತಿರುವ ನೀಲವಾದ ವಸನಗಳೆರಡನ್ನೂ ತಂದು ಅವನಿಗೆ ಕೊಟ್ಟಳು.

೧೭. ಆಗವನು ಅವತಂಸೋತ್ಪಲವನ್ನು ಧರಿಸಿ, ದಿವ್ಯವಾದ ಕುಂಡಲಗಳನ್ನು ತೊಟ್ಟು, ನೀಲಾಂಬರಗಳನ್ನುಟ್ಟು, ಮಾಲೆಯನ್ನು ಹಾಕಿಕೊಂಡು, ಕಾಂತಿಯೊಡನೆ ಮೆರೆದನು. (ಮದಿರಾ ಸೇವನೆಯಿಂದುಂಟಾದ ಮಾಲಿನ್ಯವು ಕಳೆದು ಶರೀರದಲ್ಲೆಲ್ಲಾ ಉಜ್ಜ್ವಲವಾದ ಕಾಂತಿಯುಂಟಾಯಿತೆಂದು ತಾತ್ಪರ್ಯವು.)

೧೮. ಹೀಗೆ ಅಲಂಕೃತನಾದ ಬಳಿಕ ಬಲರಾಮನು ಗೋಕುಲದಲ್ಲಿ ವಿಹರಿಸುತ್ತಿದ್ದನು. ಎರಡು ತಿಂಗಳು ಕಳೆದ ನಂತರ ಮತ್ತೆ ಅವನು ಮಥುರಾ ನಗರಕ್ಕೆ ಬಂದನು.

ರೇವತೀಂ ಚೈವ ತನಯಾಂ ರೈವತಸ್ಯ ಮಹೀಪತೇಃ ।
ಉಪಯೇಮೇ ಬಲಸ್ತಸ್ಯಾಂ ಜಜ್ಞಾತೇ ನಿಶಠೋಲ್ಮುಕೌ ॥ ೧೯ ॥

ಇತಿ ಶ್ರೀಮಹಾಪುರಾಣೇ ಆದಿಬ್ರಾಹ್ಮೇ ಹಲಕ್ರೀಡಾವರ್ಣನಂ
ನಾಮಾಷ್ಟನವತ್ಯಧಿಕಶತತಮೋऽಧ್ಯಾಯಃ

---

೧೯. ಕೆಲವು ಕಾಲದಮೇಲೆ ರೈವತನೆಂಬ ದೊರೆಯ ಮಗಳಾದ ರೇವತಿಯೆಂಬುವಳನ್ನು ಕೊಟ್ಟು ಅವನಿಗೆ ಮದುವೆಯಾಯಿತು. ರೇವತಿಯಲ್ಲಿ ಅವನಿಗೆ ನಿಶಠ, ಉಲ್ಮುಕರೆಂಬ ಇಬ್ಬರು ಮಕ್ಕಳು ಜನಿಸಿದರು.

ಇಲ್ಲಿಗೆ ಶ್ರೀಬ್ರಹ್ಮಪುರಾಣದಲ್ಲಿ ಬಲರಾಮನ ಕ್ರೀಡಾವರ್ಣನವೆಂಬ
ನೂರತೊಂಭತ್ತೆಂಟನೆಯ ಅಧ್ಯಾಯವು ಮುಗಿದುದು.



ಶ್ರೀಃ

ಓಂ ತತ್ಸದ್ಬ್ರಹ್ಮಣೇನಮಃ

# ಅಥ ಮಹಾಪುರಾಣೇ ಬ್ರಾಹ್ಮೇ

## ನವನವತ್ಯಧಿಕಶತತಮೋಽಧ್ಯಾಯಃ

॥ ವ್ಯಾಸ ಉವಾಚ ॥

ಭೀಷ್ಮಕಃ ಕುಂಡಿನೇ ರಾಜಾ ವಿದರ್ಭವಿಷಯೇಽಭವತ್ ।
ರುಕ್ಮಿಣೀ ತಸ್ಯ ದುಹಿತಾ ರುಕ್ಮೀ ಚೈವ ಸುತೋ ದ್ವಿಜಾಃ ॥ ೧ ॥

ರುಕ್ಮಿಣೀಂ ಚಕಮೇ ಕೃಷ್ಣಃ ಸಾ ಚ ತಂ ಚಾರುಹಾಸಿನೀ ।
ನ ದದೌ ಯಾಚತೇ ಚೈನಾಂ ರುಕ್ಮೀ ದ್ವೇಷೇಣ ಚಕ್ರಿಣೇ ॥ ೨ ॥

ದದೌ ಸ ಶಿಶುಪಾಲಾಯ ಜರಾಸಂಧಪ್ರಚೋದಿತಃ ।
ಭೀಷ್ಮಕೋ ರುಕ್ಮಿಣಾ ಸಾರ್ಧಂ ರುಕ್ಮಿಣೀಮುರುವಿಕ್ರಮಃ ॥ ೩ ॥

---

### ನೂರತೊಂಭತ್ತೊಂಭತ್ತನೆಯ ಅಧ್ಯಾಯವು

೧. ವ್ಯಾಸನು ಹೇಳತೊಡಗಿದನು ;—ವಿದರ್ಭದೇಶದ ರಾಜಧಾನಿಯಾದ ಕುಂಡಿನ ನಗರದಲ್ಲಿ ಭೀಷ್ಮಕನೆಂಬ ಅರಸನಿದ್ದನು. ಅವನಿಗೆ ರುಕ್ಮಿಯೆಂಬ ಮಗನೂ ರುಕ್ಮಿಣಿ ಎಂಬ ಮಗಳೂ ಇದ್ದರು.

೨. ಕೃಷ್ಣನು ರುಕ್ಮಿಣಿಯನ್ನು ಪ್ರೇಮಿಸಿದನು. ಆ ಮೆಲುನಗೆಯ ರುಕ್ಮಿಣಿಯೂ ಸಹ ಆತನಲ್ಲಿ ಅನುರಾಗವನ್ನು ತಾಳಿದಳು. ಆದರೆ ಅವಳ ಅಣ್ಣನಾದ ರುಕ್ಮಿಯು ಕೃಷ್ಣನಲ್ಲಿ ದ್ವೇಷವನ್ನು ತಾಳಿ, ಅವನು ತಾನಾಗಿ ಬೇಡಿದರೂ ರುಕ್ಮಿಣಿಯನ್ನು ಕೊಡಲು ಒಪ್ಪಲಿಲ್ಲ.

೩. ಜರಾಸಂಧನು ಶಿಶುಪಾಲನಿಗೆ ಕೊಡುವಂತೆ ಒತ್ತಾಯಪಡಿಸಿದನು. ಆಗ ಭೀಷ್ಮಕನು ತನ್ನ ಮಗನಾದ ರುಕ್ಮಿಯ ಒಪ್ಪಿಗೆಯನ್ನು ಪಡೆದು ಶಿಶುಪಾಲನಿಗೆ ತನ್ನ ಮಗಳನ್ನು ಕೊಡುವುದಾಗಿ ವಾಗ್ದಾನಮಾಡಿದನು.

ವಿವಾಹಾರ್ಥಂ ತತಃ ಸರ್ವೇ ಜರಾಸಂಧಮುಖಾ ನೃಪಾಃ ।
ಭೀಷ್ಮಕಸ್ಯ ಪುರಂ ಜಗ್ಮುಃ ಶಿಶುಪಾಲಶ್ಚ ಕುಂಡಿನಂ ॥ ೪ ॥

ಕೃಷ್ಣೋಽಪಿ ಬಲಭದ್ರಾದ್ಯೈರ್ಯದುಭಿಃ ಪರಿವಾರಿತಃ ।
ಪ್ರಯಯೌ ಕುಂಡಿನಂ ದ್ರಷ್ಟುಂ ವಿವಾಹಂ ಚೈದ್ಯಭೂಪತೇಃ ॥ ೫ ॥

ಶ್ವೋಭಾವಿನಿ ವಿವಾಹೇ ತು ತಾಂ ಕನ್ಯಾಂ ಹೃತವಾನ್ಹರಿಃ ।
ವಿಪಕ್ಷಭಾವಮಾಸಾದ್ಯ ರಾಮಾದ್ಯೇಷ್ವೇವ ಬಂಧುಷು ॥ ೬ ॥

ತತಶ್ಚ ಪೌಂಡ್ರಕಃ ಶ್ರೀಮಾನ್ದಂತವಕ್ತ್ರೋ ವಿದೂರಥಃ ।
ಶಿಶುಪಾಲೋ ಜರಾಸಂಧಃ ಶಾಲ್ವಾದ್ಯಾಶ್ಚ ಮಹೀಭೃತಃ ॥ ೭ ॥

ಕುಪಿತಾಸ್ತೇ ಹರಿಂ ಹಂತುಂ ಚಕ್ರುರುದ್ಯೋಗಮುತ್ತಮಂ ।
ನಿರ್ಜಿತಾಶ್ಚ ಸಮಾಗಮ್ಯ ರಾಮಾದ್ಯೈರ್ಯದುಪುಂಗವೈಃ ॥ ೮ ॥

---

೪. ಅನಂತರ ವಿವಾಹದ ಸಲುವಾಗಿ ಜರಾಸಂಧ ಮೊದಲಾದ ರಾಜರೂ, ವರನಾದ ಶಿಶುಪಾಲನೂ ಭೀಷ್ಮಕನ ಊರಾದ ಕುಂಡಿನ ನಗರಕ್ಕೆ ಹೊರಟರು.

೫. ಆಗ ಕೃಷ್ಣನೂ ಸಹ ಬಲಭದ್ರನೇ ಮೊದಲಾದ ಯಾದವರೊಡನೆ ಕೂಡಿ ಚೇದಿ ದೇಶದರಸನಾದ ಶಿಶುಪಾಲನ ವಿವಾಹವನ್ನು ನೋಡುವುದಕ್ಕೋಸ್ಕರ ಕುಂಡಿನ ನಗರಕ್ಕೆ ಬಂದನು.

೬. ನಾಳೆ ವಿವಾಹವೆನ್ನುವಾಗ ಶ್ರೀಕೃಷ್ಣನು ಬಲರಾಮ ಮೊದಲಾದವರೊಡನೆ ಆಲೋಚಿಸಿ, ಶತ್ರುಭಾವವನ್ನು ತಳೆದು ವಿವಾಹ ಕನ್ಯೆಯಾದ ರುಕ್ಮಿಣಿಯನ್ನಪಹರಿಸಿದನು.

೭-೮. ಆಗ ಪೌಂಡ್ರಕನೂ, ದಂತವಕ್ತ್ರನೂ, ವಿದೂರಥನೂ, ಶಿಶುಪಾಲ, ಜರಾಸಂಧ, ಶಾಲ್ವ ಮೊದಲಾದ ಇತರ ಅರಸುಗಳೂ ಬಹುಕೋಪವನ್ನು ತಾಳಿ ಶ್ರೀಕೃಷ್ಣನನ್ನು ಸಂಹರಿಸಿಬಿಡಬೇಕೆಂದು ಎಣಿಸಿ ಮಹಾಪ್ರಯತ್ನದಿಂದ ಮೇಲೇರಿ ಬಂದು ಬಿದ್ದರು. ಆಗ ಬಲರಾಮ ಮೊದಲಾದ ಯದುವೀರರು ಅವರೆಲ್ಲರನ್ನೂ ಸೋಲಿಸಿಬಿಟ್ಟರು.

ಕುಂಡಿನಂ ನ ಪ್ರವೇಕ್ಷ್ಯಾಮಿ ಅಹತ್ವಾ ಯುಧಿ ಕೇಶವಂ ।
ಕೃತ್ವಾ ಪ್ರತಿಜ್ಞಾಂ ರುಕ್ಮೀ ಚ ಹಂತುಂ ಕೃಷ್ಣಮಭಿದ್ರುತಃ ॥ ೯ ॥

ಹತ್ವಾ ಬಲಂ ಸ ನಾಗಾಶ್ವಪತ್ತಿಸ್ಯಂದನಸಂಕುಲಂ ।
ನಿರ್ಜಿತಃ ಪಾತಿತಶ್ಚೋರ್ವ್ಯಾಂ ಲೀಲಯೈವ ಸ ಚಕ್ರಿಣಾ ॥ ೧೦ ॥

ನಿರ್ಜಿತ್ಯ ರುಕ್ಮಿಣಂ ಸಮ್ಯಗುಪಯೇಮೇ ಸ ರುಕ್ಮಿಣೀಂ ।
ರಾಕ್ಷಸೇನ ವಿಧಾನೇನ ಸಂಪ್ರಾಪ್ತೋ ಮಧುಸೂದನಃ ॥ ೧೧ ॥

ತಸ್ಯಾಂ ಜಜ್ಞೇ ಚ ಪ್ರದ್ಯುಮ್ನೋ ಮದನಾಂಶಃ ಸ ವೀರ್ಯವಾನ್ ।
ಜಹಾರ ಶಂಬರೋ ಯಂ ವೈ ಯೋ ಜಘಾನ ಚ ಶಂಬರಂ ॥ ೧೨ ॥

ಇತಿ ಶ್ರೀಮಹಾಪುರಾಣೇ ಆದಿಬ್ರಾಹ್ಮೇ ಶ್ರೀಕೃಷ್ಣಚರಿತೇ
ನವನವತ್ಯಧಿಕಶತತಮೋಽಧ್ಯಾಯಃ

---

೯-೧೦. ಆಗ ರುಕ್ಮಿಯು 'ಕೃಷ್ಣನನ್ನು ನಾನು ಯುದ್ಧದಲ್ಲಿ ಕೊಲ್ಲದೆ ಕುಂಡಿನ ನಗರಕ್ಕೆ ಹಿಂದಿರುಗಿ ಹೋಗುವುದಿಲ್ಲ' ವೆಂದು ಶಪಥಮಾಡಿ ಕೃಷ್ಣನನ್ನು ಬೆನ್ನಟ್ಟಿ ಹೋಗಿ, ಕೃಷ್ಣನೊಡನೆ ಬಹು ಜೋರಾಗಿ ಯುದ್ಧಮಾಡಿದನು. ಆಗ ಶ್ರೀಕೃಷ್ಣನು ಲೀಲಾಮಾತ್ರದಿಂದಲೇ ಆ ರುಕ್ಮಿಯ ಆನೆ, ಕುದುರೆ, ಕಾಲಾಳು, ತೇರು ಎಂಬ ಚತುರಂಗದಿಂದ ಸಮೃದ್ಧವಾದ ಸೇನೆಯನ್ನು ಸಂಹರಿಸಿ, ರುಕ್ಮಿಯನ್ನು ಸೋಲಿಸಿ ನೆಲಕ್ಕೆ ಕೆಡವಿದನು.

೧೧. ರುಕ್ಮಿಯನ್ನು ಸೋಲಿಸಿದನಂತರ ಕೃಷ್ಣನು ತಾನು ರಾಕ್ಷಸ ವಿಧಾನದಿಂದ ಕದ್ದೊಯ್ದು ತಂದಿದ್ದ ರುಕ್ಮಿಣಿಯನ್ನು ಶಾಸ್ತ್ರೋಕ್ತರೀತಿಯಲ್ಲಿ ಸಂಭ್ರಮದಿಂದ ಮದುವೆಯಾದನು.

೧೨. ಆ ರುಕ್ಮಿಣಿಯಲ್ಲೇ ಮನ್ಮಥಾಂಶಸಂಭೂತನೂ, ಮಹಾಪರಾಕ್ರಮಶಾಲಿಯೂ ಆದ ಪ್ರದ್ಯುಮ್ನನು ಹುಟ್ಟಿದನು. ಅವನನ್ನು ಶಂಬರಾಸುರನು, ಬಾಲ್ಯದಲ್ಲಿಯೇ ಅಪಹರಿಸಿದನು. ಆ ಶಂಬರನನ್ನು ಕೊನೆಗೆ ಪ್ರದ್ಯುಮ್ನನು ಸಂಹರಿಸಿಬಿಟ್ಟನು.

ಇಲ್ಲಿಗೆ ಶ್ರೀ ಬ್ರಹ್ಮಪುರಾಣದಲ್ಲಿ ಕೃಷ್ಣಚರಿತವರ್ಣನವೆಂಬ
ನೂರತೊಂಭತ್ತೊಂಭತ್ತನೆಯ ಅಧ್ಯಾಯವು ಮುಗಿದುದು.

ಶ್ರೀಃ

ಓಂ ತತ್ಸದ್ಬ್ರಹ್ಮಣೇನಮಃ

# ಅಥ ಬ್ರಾಹ್ಮೇ ಮಹಾಪುರಾಣೇ
# ದ್ವಿಶತತಮೋಽಧ್ಯಾಯಃ

---

॥ ಮುನಯ ಊಚುಃ ॥

ಶಂಬರೇಣ ಹೃತೋ ವೀರಃ ಪ್ರದ್ಯುಮ್ನಃ ಸ ಕಥಂ ಪುನಃ ।
ಶಂಬರಶ್ಚ ಮಹಾವೀರ್ಯಃ ಪ್ರದ್ಯುಮ್ನೇನ ಕಥಂ ಹತಃ ॥ ೧ ॥

॥ ವ್ಯಾಸ ಉವಾಚ ॥

ಷಷ್ಠೇಽಹ್ನಿ ಜಾತಮಾತ್ರೇ ತು ಪ್ರದ್ಯುಮ್ನಂ ಸೂತಿಕಾಗೃಹಾತ್ ।
ಮಮೈಷ ಹಂತೇತಿ ದ್ವಿಜಾ ಹೃತವಾನ್ಕಾಲಶಂಬರಃ ॥ ೨ ॥

ನೀತ್ವಾ ಚಿಕ್ಷೇಪ ಚೈವೈನಂ ಗ್ರಾಹೋಽಗ್ರೇ ಲವಣಾರ್ಣವೇ ।
ಕಲ್ಲೋಲಜನಿತಾವರ್ತೇ ಸುಘೋರೇ ಮಕರಾಲಯೇ ॥ ೩ ॥

---

## ಇನ್ನೂರನೆಯ ಅಧ್ಯಾಯವು

೧. ಆಗ ಋಷಿಗಳು ವ್ಯಾಸಮಹರ್ಷಿಯನ್ನು ಕುರಿತು, "ವೀರನಾದ ಪ್ರದ್ಯುಮ್ನನನ್ನು ಶಂಬರಾಸುರನು ಅಪಹರಿಸಿದುದು ಹೇಗೆ? ಮಹಾಪರಾಕ್ರಮಿಯಾದ ಆ ಶಂಬರನನ್ನು ಪ್ರದ್ಯುಮ್ನನು ಕೊಂದುದಾದರೂ ಹೇಗೆ?" ಎಂಬುದಾಗಿ ಪ್ರಶ್ನಿಸಲು ವ್ಯಾಸನು ಇಂತೆಂದನು :—

೨. ಎಲೈ ದ್ವಿಜೋತ್ತಮರೇ, ಆ ಪ್ರದ್ಯುಮ್ನನು ಹುಟ್ಟಿದೊಡನೆಯೇ ನನ್ನನ್ನು ಇವನು ಕೊಲ್ಲುವನು ಎಂಬುದಾಗಿ ತಿಳಿದುಕೊಂಡು, ಕಾಲನಂತೆ ಇದ್ದ ಶಂಬರಾಸುರನು ಆರನೆಯದಿನ ಬೆಳಗಾಗುತ್ತಿದ್ದಂತೆಯೇ ಹೆರಿಗೆಯ ಮನೆಯಿಂದ ಅಪಹರಿಸಿದನು.

೩. ಅವನನ್ನು ಅಪಹರಿಸಿದ ನಂತರ, ಭಾರಿ ಭಾರಿ ಮೊಸಳೆಗಳಿಂದಲೂ, ಅಲೆಗಳಿಂದಲೂ, ಸುಳಿಗಳಿಂದಲೂ ಕೂಡಿ ಅತಿಭಯಂಕರವಾಗಿದ್ದ ಲವಣಸಮುದ್ರದಲ್ಲಿ ಆ ಬಾಲಕನನ್ನು ಎಸೆದುಬಿಟ್ಟನು.

ಪತಿತಂ ಚೈವ ತತ್ರೈಕೋ ಮತ್ಸ್ಯೋ ಜಗ್ರಾಹ ಬಾಲಕಂ ।
ನ ಮಮಾರ ಚ ತಸ್ಯಾಪಿ ಜಠರಾನಲದೀಪಿತಃ ॥ ೪ ॥

ಮತ್ಸ್ಯಬಂಧೈಶ್ಚ ಮತ್ಸ್ಯೋಽಸೌ ಮತ್ಸ್ಯೈರನ್ಯೈಃ ಸಹ ದ್ವಿಜಾಃ ।
ಘಾತಿತೋಽಸುರವರ್ಯಾಯ ಶಂಬರಾಯ ನಿವೇದಿತಃ ॥ ೫ ॥

ತಸ್ಯ ಮಾಯಾವತೀ ನಾಮ ಪತ್ನೀ ಸರ್ವಗೃಹೇಶ್ವರೀ ।
ಕಾರಯಾಮಾಸ ಸೂದಾನಾಮಾಧಿಪತ್ಯಮನಿಂದಿತಾ ॥ ೬ ॥

ದಾರಿತೇ ಮತ್ಸ್ಯಜಠರೇ ದದೃಶೇ ಸಾತಿಶೋಭನಂ ।
ಕುಮಾರಂ ಮನ್ಮಥತರೋರ್ದಗ್ಧಸ್ಯ ಪ್ರಥಮಾಂಕುರಂ ॥ ೭ ॥

---

೪. ಆ ಶಂಬರನು ಮಗುವನ್ನು ಬಿಸಾಡುತ್ತಲೇ ಅದನ್ನು ಮೀನೊಂದು ನುಂಗಿತು. ಆರೀತಿ ಸಮುದ್ರದಲ್ಲಿ ಬೀಳುವಾಗಲೂ, ಆ ಮೀನಿನ ಜಠರಾಗ್ನಿಯಲ್ಲಿ ಸಿಲುಕಿ ಪೀಡಿತನಾಗಿದ್ದಾಗಲೂ ಮಗುವು ಸಾಯಲಿಲ್ಲ.

೫. ಎಲೈ ಬ್ರಾಹ್ಮಣಶ್ರೇಷ್ಠರೇ, ಆಗ ಸಮುದ್ರದಲ್ಲಿ ಮೀನು ಹಿಡಿದು ಜೀವಿಸುತ್ತಿದ್ದ ಬೆಸ್ತರು ಬಲೆಯೊಡ್ಡಿದಾಗ ಆ ಮಗುವನ್ನು ನುಂಗಿದ ಮೀನು ಇತರ ಮೀನುಗಳೊಂದಿಗೆ ಅದಕ್ಕೆ ಸಿಕ್ಕಿಕೊಂಡಿತು. ಅವರು ಆ ಮೀನುಗಳನ್ನು ತೆಗೆದುಕೊಂಡು ಹೋಗಿ ರಾಕ್ಷಸಶ್ರೇಷ್ಠನಾದ ಆ ಶಂಬರನಿಗೇ ಒಪ್ಪಿಸಿದರು.

೬. ಆ ಶಂಬರನಿಗೆ ಮಾಯಾವತಿಯೆಂಬ ಹೆಂಡತಿಯೊಬ್ಬಳಿದ್ದಳು. ಅವಳು ಮನೆಗೆಲ್ಲ ಸರ್ವಾಧಿಕಾರಿಣಿಯೆನಿಸಿದ್ದಳು. ಅವಳು ಅಡಿಗೆಯ ಮನೆಯ ಪರಿಚಾರಕರ ಮೇಲ್ವಿಚಾರಣೆಯನ್ನು ಸ್ವತಃ ನೋಡುತ್ತಿದ್ದಳು.

೭. ಮೀನಿನ ಹೊಟ್ಟೆಯನ್ನು ಸೀಳುತ್ತಲೇ ಅದರಲ್ಲಿ, ಸುಟ್ಟುಹೋದ ಮನ್ಮಥನೆಂಬ ವೃಕ್ಷದ ಮೊದಲನೆಯ ಅಂಕುರದಂತೆ ಅತಿಸುಂದರವಾದ ಆಕೃತಿಯುಳ್ಳ ಮಗುವೊಂದನ್ನು ಕಂಡಳು.

ಕೋऽಯಂ ಕಥಮಯಂ ಮತ್ಸ್ಯಜಠರೇ ಸಮುಪಾಗತಃ ।
ಇತ್ಯೇವಂ ಕೌತುಕಾವಿಷ್ಟಾಂ ತಾಂ ತನ್ವೀಂ ಪ್ರಾಹ ನಾರದಃ ॥ ೮ ॥

॥ ನಾರದ ಉವಾಚ ॥

ಅಯಂ ಸಮಸ್ತಜಗತಾಂ ಸೃಷ್ಟಿಸಂಹಾರಕಾರಿಣಾ ।
ಶಂಬರೇಣ ಹೃತಃ ಕೃಷ್ಣತನಯಃ ಸೂತಿಕಾಗೃಹಾತ್ ॥ ೯ ॥

ಕ್ಷಿಪ್ತಃ ಸಮುದ್ರೇ ಮತ್ಸ್ಯೇನ ನಿಗೀರ್ಣಸ್ತೇ ವಶಂ ಗತಃ ।
ನರರತ್ನಮಿದಂ ಸುಭ್ರು ವಿಶ್ರಬ್ಧಾ ಪರಿಪಾಲಯ ॥ ೧೦ ॥

॥ ವ್ಯಾಸ ಉವಾಚ ॥

ನಾರದೇನೈವಮುಕ್ತಾ ಸಾ ಪಾಲಯಾಮಾಸ ತಂ ಶಿಶುಂ ।
ಬಾಲ್ಯಾದೇವಾತಿರಾಗೇಣ ರೂಪಾತಿಶಯಮೋಹಿತಾ ॥ ೧೧ ॥

---

೮. ಅವಳಿಗೆ ಈ ಮಗುವು ಯಾರು? ಈ ಮೀನಿನ ಹೊಟ್ಟೆಯಲ್ಲಿ ಬರಲು ಕಾರಣವೇನು? ಎಂದು ಮುಂತಾಗಿ ಕುತೂಹಲವುಂಟಾಯಿತು. ಆ ಸಮಯಕ್ಕೆ ಸರಿಯಾಗಿ ಅಲ್ಲಿಗೆ ನಾರದನು ಬಂದು ಆ ತರುಣಿಯನ್ನು ಕುರಿತು,

೯-೧೦. ಎಲೈ ಸುಭ್ರು, (ಅಂದವಾದ ಹುಬ್ಬು ಇರುವವಳು) ಇವನು ಕೃಷ್ಣನ ಮಗನು. ಸಕಲ ಜಗತ್ತುಗಳನ್ನೂ ಸೃಷ್ಟಿಸಲೂ, ಪಾಲಿಸಲೂ, ಸಂಹರಿಸಲೂ ಸಮರ್ಥನಾದ ಶಂಬರಾಸುರನು ಇವನನ್ನು ಹೆರಿಗೆ ಮನೆಯಿಂದ ಕದ್ದು ತಂದು ಸಮುದ್ರಕ್ಕೆ ಎಸೆದುಬಿಟ್ಟನು. ಅದನ್ನು ಮೀನು ನುಂಗಿಬಿಟ್ಟಿತು. ಈಗ ನಿನಗೆ ಸಿಕ್ಕಿದನು. ಇವನನ್ನು ಬಹು ಎಚ್ಚರಿಕೆಯಿಂದ ಕಾಪಾಡು ಎಂದನು.

೧೧. ಈರೀತಿಯಾಗಿ ನಾರದನು ಹೇಳುತ್ತಲೇ ಆ ಮಾಯಾವತಿಯು ಮಗುವು ತೀರ ಹಸುಳೆಯಾಗಿದ್ದರೂ ಅದರ ರೂಪಾತಿಶಯಕ್ಕೆ ಮನಸೋತು ಬಹು ಅನುರಾಗವನ್ನು ತಾಳಿ ಅದನ್ನು ಸಾಕತೊಡಗಿದಳು.

**ಸ ಯದಾ ಯೌವನಾಭೋಗಭೂಷಿತೋಽಭೂದ್ದ್ವಿಜೋತ್ತಮಾಃ ।**
**ಸಾಭಿಲಾಷಾ ತದಾ ಸಾ ತು ಬಭೂವ ಗಜಗಾಮಿನೀ ॥ ೧೨ ॥**

**ಮಾಯಾವತೀ ದದೌ ಚಾಸ್ಮೈ ಮಾಯಾ ಸರ್ವಾ ಮಹಾತ್ಮನೇ ।**
**ಪ್ರದ್ಯುಮ್ನಾಯಾತ್ಮಭೂತಾಯ ತನ್ನ್ಯಸ್ತಹೃದಯೇಕ್ಷಣಾ ।**
**ಪ್ರಸಜ್ಜಂತೀಂ ತು ತಾಮಾಹ ಸ ಕಾರ್ಷ್ಣಿಃ ಕಮಲಲೋಚನಃ ॥ ೧೩ ॥**

**॥ ಪ್ರದ್ಯುಮ್ನ ಉವಾಚ ॥**

**ಮಾತೃಭಾವಂ ವಿಹಾಯೈವ ಕಿಮರ್ಥಂ ವರ್ತಸೇಽನ್ಯಥಾ ॥ ೧೪ ॥**

**॥ ವ್ಯಾಸ ಉವಾಚ ॥**

**ಸಾ ಚಾಸ್ಮೈ ಕಥಯಾಮಾಸ ನ ಪುತ್ರಸ್ತ್ವಂ ಮಮೇತಿ ವೈ ।**
**ತನಯಂ ತ್ವಾಮಯಂ ವಿಷ್ಣೋರ್ಹೃತವಾನ್ಕಾಲಶಂಬರಃ ॥ ೧೫ ॥**

---

೧೨- ಎಲೈ ದ್ವಿಜಶ್ರೇಷ್ಠರೇ, ಆ ಬಾಲಕನು ಯಾವಾಗ ಸಂಪೂರ್ಣ ಯೌವನಶಾಲಿಯಾದನೋ ಆಗ ಆ ಗಜಗಮನೆಯು ಅವನಲ್ಲಿ ಮತ್ತಷ್ಟು ಅಭಿಲಾಷೆಯನ್ನು ತೋರತೊಡಗಿದಳು.

೧೩-೧೪. ಮಾಯಾವತಿಯು ತನ್ನ ಹೃದಯದಂತಿದ್ದ ಆ ಪ್ರದ್ಯುಮ್ನನಲ್ಲಿಯೇ ತನ್ನ ಮನಸ್ಸನ್ನೂ ಕಣ್ಣುಗಳನ್ನೂ ನೆಲೆಗೊಳಿಸುತ್ತಾ ಅವನಿಗೆ ಎಲ್ಲ ವಿಧವಾದ ಮಾಯೆಗಳನ್ನೂ. ಉಪದೇಶಿಸಿದಳು. ಈರೀತಿಯಾಗಿ ಒಂದಲ್ಲ ಒಂದುರೀತಿಯಲ್ಲಿ ತನ್ನ ಬಳಿಯಲ್ಲಿಯೇ ಇರುತ್ತಿದ್ದ ಮಾಯಾವತಿಯನ್ನು ಕಂಡು ಕಮಲದಂತೆ ಮನೋಹರವಾದ ಕಂಗಳುಳ್ಳ ಪ್ರದ್ಯುಮ್ನನು, ಇದೇನು ಈರೀತಿಯಾಗಿ ತಾಯಿಯಂತೆ ನನ್ನನ್ನು ಕಾಣದೆ ಬೇರೆ ರೀತಿಯಾಗಿ ವರ್ತಿಸುತ್ತಿರುವೆ ಎಂದು ಪ್ರಶ್ನಿಸಿದನು.

೧೫.೧೬. ಆಗ ಅವಳು ನೀನು ನನ್ನ ಮಗನಲ್ಲ. ಶ್ರೀಕೃಷ್ಣನ ಪುತ್ರನಾದ ನಿನ್ನನ್ನು ಈ ಕಾಲಶಂಬರನು ಕದ್ದು ತಂದು ಸಮುದ್ರದಲ್ಲಿ ಬಿಸಾಡಿದನು. ನಿನ್ನನ್ನು ಒಂದು ಮೀನು ನುಂಗಿತು. ಮೀನಿನ ಹೊಟ್ಟೆಯಿಂದ ನೀನು ನನಗೆ

ಕ್ಷಿಪ್ತಃ ಸಮುದ್ರೇ ಮತ್ಸ್ಯಸ್ಯ ಸಂಪ್ರಾಪ್ತೋ ಜಠರಾನ್ಮಯಾ ।
ಸಾ ತು ರೋದಿತಿ ತೇ ಮಾತಾ ಕಾಂತಾದ್ಯಾಪ್ಯತಿವತ್ಸಲಾ ॥ ೧೬ ॥

॥ ವ್ಯಾಸ ಉವಾಚ ॥

ಇತ್ಯುಕ್ತಃ ಶಂಬರಂ ಯುದ್ಧೇ ಪ್ರದ್ಯುಮ್ನಃ ಸ ಸಮಾಹ್ವಯತ್ ।
ಕ್ರೋಧಾಕುಲೀಕೃತಮನಾ ಯುಯುಧೇ ಚ ಮಹಾಬಲಃ ॥ ೧೭ ॥

ಹತ್ವಾ ಸೈನ್ಯಮಶೇಷಂ ತು ತಸ್ಯ ದೈತ್ಯಸ್ಯ ಮಾಧವಿಃ ।
ಸಪ್ತ ಮಾಯಾ ವ್ಯತಿಕ್ರಮ್ಯ ಮಾಯಾಂ ಸಂಯುಯುಜೇಽಷ್ಟಮೀಂ ॥೧೮॥

ತಯಾ ಜಘಾನ ತಂ ದೈತ್ಯಂ ಮಾಯಯಾ ಕಾಲಶಂಬರಂ ।
ಉತ್ಪತ್ಯ ಚ ತಯಾ ಸಾರ್ಧಮಾಜಗಾಮ ಪಿತುಃ ಪುರಂ ॥ ೧೯ ॥

---

ದೊರೆತಿರುವೆ. ಮಕ್ಕಳೆಂದರೆ ಹಂಬಲಿಸುವ ನಿನ್ನ ತಾಯಿಯು ಇಂದಿಗೂ ಬಹುವಾಗಿ ದುಃಖಿಸುತ್ತಿರುವಳು ಎಂದು ನುಡಿದಳು.

೧೭. ಹೀಗೆ ಅವಳು ಹೇಳುತ್ತಲೇ ಮಹಾಬಲಶಾಲಿಯಾದ ಪ್ರದ್ಯುಮ್ನನಿಗೆ ಕೋಪವು ಉಕ್ಕೇರಿ ಬಂದಿತು. ಅವನು ಶಂಬರಾಸುರನನ್ನು ಯುದ್ಧಕ್ಕೆ ಬರುವಂತೆ ಆಹ್ವಾನಿಸಿದನು.

೧೮. ಬಳಿಕ ಶಂಬರನ ಸೈನ್ಯವೆಲ್ಲವನ್ನೂ ಸಂಹರಿಸುದುದುಲ್ಲದೆ ಅವನು ಪ್ರಯೋಗಿಸಿದ ಏಳು ಮಾಯೆಗಳನ್ನೂ ನಿಗ್ರಹಿಸಿ ತಾನೇ ಎಂಟನೆಯದಾಗಿ ಮತ್ತೊಂದು ಮಾಯೆಯನ್ನು ಅವನ ಮೇಲೆ ಬೀಸಿದನು.

೧೯. ಆ ಮಾಯೆಯಿಂದ ದೈತ್ಯನಾದ ಶಂಬರನು ಹತನಾದನು. ಬಳಿಕ ಪ್ರದ್ಯುಮ್ನನು ಮಾಯಾವತಿಯೊಂದಿಗೆ ತನ್ನ ತಂದೆಯ ನಗರವಾದ ದ್ವಾರಕಿಗೆ ಮಾಯಾಬಲದಿಂದಲೇ ಹಾರಿಬಂದನು.

**ಅಂತಃಪುರೇ ಚ ಪತಿತಂ ಮಾಯಾವತ್ಯಾ ಸಮನ್ವಿತಂ ।**
**ತಂ ದೃಷ್ಟ್ವಾ ಹೃಷ್ಟಸಂಕಲ್ಪಾ ಬಭೂವುಃ ಕೃಷ್ಣಯೋಷಿತಃ ।**
**ರುಕ್ಮಿಣೀ ಚಾಬ್ರವೀತ್ಪ್ರೇಮ್ಣಾಸಕ್ತದೃಷ್ಟಿರನಿಂದಿತಾ ॥ ೨೦ ॥**

**॥ ರುಕ್ಮಿಣ್ಯುವಾಚ ॥**

**ಧನ್ಯಾಯಾಃ ಖಲ್ವಯಂ ಪುತ್ರೋ ವರ್ತತೇ ನವಯೌವನೇ ।**
**ಅಸ್ಮಿನ್ವಯಸಿ ಪುತ್ರೋ ಮೇ ಪ್ರದ್ಯುಮ್ನೋ ಯದಿ ಜೀವತಿ ॥ ೨೧ ॥**

**ಸಭಾಗ್ಯಾ ಜನನೀ ವತ್ಸ ತ್ವಯಾ ಕಾಪಿ ವಿಭೂಷಿತಾ ।**
**ಅಥವಾ ಯಾದೃಶಃ ಸ್ನೇಹೋ ಮಮ ಯಾದೃಗ್ವಪುಶ್ಚ ತೇ ।**
**ಹರೇರಪತ್ಯಂ ಸುವ್ಯಕ್ತಂ ಭವಾನ್ವತ್ಸ ಭವಿಷ್ಯತಿ ॥ ೨೨ ॥**

**॥ ವ್ಯಾಸ ಉವಾಚ ॥**

**ಏತಸ್ಮಿನ್ನಂತರೇ ಪ್ರಾಪ್ತಃ ಸಹ ಕೃಷ್ಣೇನ ನಾರದಃ ।**
**ಅಂತಃಪುರವರಾಂ ದೇವೀಂ ರುಕ್ಮಿಣೀಂ ಪ್ರಾಹ ಹರ್ಷಿತಃ ॥ ೨೩ ॥**

---

೨೦. ಈರೀತಿಯಾಗಿ ಮಾಯಾವತಿಯೊಂದಿಗೆ ಅಂತಃಪುರದಲ್ಲಿ ಬಂದಿಳಿದ ಪ್ರದ್ಯುಮ್ನನನ್ನು ಕಂಡು ಶ್ರೀಕೃಷ್ಣನ ಪತ್ನಿಯರೆಲ್ಲರೂ ಬಹು ಸಂತೋಷವನ್ನು ತಾಳಿದರು. ರುಕ್ಮಿಣಿಯು ಪುತ್ರವಾತ್ಸಲ್ಯದಿಂದ ಪ್ರದ್ಯುಮ್ನನಲ್ಲಿಯೇ ನೆಲಸಿದ ದೃಷ್ಟಿಯುಳ್ಳವಳಾಗಿ ಅವನನ್ನು ಕುರಿತು ಇಂತೆಂದು ನುಡಿದಳು.

೨೧. ನೂತನವಾಗಿ ಯೌವನದಲ್ಲಿ ಪದಾರ್ಪಣಮಾಡುತ್ತಿರುವೀ ಕುಮಾರನನ್ನು ಹೆತ್ತ ತಾಯಿಯು ಯಾರು? ಇಂತಹ ಮಗನನ್ನು ಪಡೆದ ತಾಯಿಯು ನಿಜವಾಗಿಯೂ ಧನ್ಯಳು. ನನ್ನ ಮಗನಾದ ಪ್ರದ್ಯುಮ್ನನು ಬದುಕಿದ್ದರೆ ಅವನೂ ಈಗ ಇದೇ ವಯಸ್ಸಿನಲ್ಲಿರುತಿದ್ದನು.

೨೨. ಎಲೈ ವತ್ಸ, ಭಾಗ್ಯಶಾಲಿನಿಯಾದ ಯಾವಳೋ ಒಬ್ಬ ಮಾತೆಯು ನಿನ್ನಂಥ ಮಗನಿಂದ ಅಲಂಕೃತಳಾಗಿರುವಳು- ಇಲ್ಲಿ ನಿನ್ನನ್ನು ಕಂಡರೆ ನನಗೆ ಉಂಟಾಗುತ್ತಿರುವ ಪ್ರೀತಿಯನ್ನೂ ನಿನ್ನ ಶರೀರವಿರುವ ರೀತಿಯನ್ನೂ ಗಮನಿದರೆ ನೀನು ಖಂಡಿತವಾಗಿಯೂ ಶ್ರೀ ಕೃಷ್ಣನ ಮಗನೇ ಆಗಿರಬೇಕು ಎಂದಳು.

೨೩. ಇಷ್ಟರಲ್ಲಿ ಅಲ್ಲಿಗೆ ನಾರದನು ಕೃಷ್ಣನೊಂದಿಗೆ ಬಂದನು. ಅವನು ಅಂತಃಪುರದಲ್ಲೆಲ್ಲಾ ಉತ್ತಮಾಂಗನೆಯೆನಿಸಿದ ರುಕ್ಮಿಣಿಯನ್ನು ಕುರಿತು,

॥ ಶ್ರೀಕೃಷ್ಣ ಉವಾಚ ॥

ಏಷ ತೇ ತನಯಃ ಸುಭ್ರು ಹತ್ವಾ ಶಂಬರಮಾಗತಃ ।
ಹೃತೋ ಯೇನಾಭವತ್ಪೂರ್ವಂ ಪುತ್ರಸ್ತೇ ಸೂತಿಕಾಗೃಹಾತ್ ॥ ೨೪ ॥

ಇಯಂ ಮಾಯಾವತೀ ಭಾರ್ಯಾ ತನಯಸ್ಯಾಸ್ಯ ತೇ ಸತೀ ।
ಶಂಬರಸ್ಯ ನ ಭಾರ್ಯೇಯಂ ಶ್ರೂಯತಾಮತ್ರ ಕಾರಣಂ ॥ ೨೫ ॥

ಮನ್ಮಥೇ ತು ಗತೇ ನಾಶಂ ತದುದ್ಭವಪರಾಯಣಾ ।
ಶಂಬರಂ ಮೋಹಯಾಮಾಸ ಮಾಯಾರೂಪೇಣ ರುಕ್ಮಿಣಿ ॥ ೨೬ ॥

ವಿವಾಹಾದ್ಯುಪಭೋಗೇಷು ರೂಪಂ ಮಾಯಾಮಯಂ ಶುಭಂ ।
ದರ್ಶಯಾಮಾಸ ದೈತ್ಯಸ್ಯ ತಸ್ಯೇಯಂ ಮದಿರೇಕ್ಷಣಾ ॥ ೨೭ ॥

---

೨೪. ಎಲೌ ಸುಭ್ರುವೇ ಇವನು ಮತ್ತಾರೂ ಅಲ್ಲ ನಿನ್ನ ಮಗನೇ, ಇವನನ್ನು ಹೆರಿಗೆಯ ಮನೆಯಿಂದ ಶಂಬರಾಸುರನು ಎತ್ತಿಕೊಂಡು ಹೋಗಿರಲಿಲ್ಲವೇ? ಶಂಬರಾಸುರನನ್ನು ಕೊಂದು ಈ ನಿನ್ನ ಮಗನು ಹಿಂದಿರುಗಿ ಬಂದಿರುವನು.

೨೫. ಈ ಮಾಯಾವತಿಯೂ ಮತ್ತೆಯಾರೂ ಅಲ್ಲ. ಮಹಾಪತಿವ್ರತೆಯಾದ ಇವಳು ನಿನ್ನೀ ಮಗನ ಹೆಂಡತಿಯು. ಇವಳು ಶಂಬರಾಸುರನ ಹೆಂಡತಿಯು ಎಂದಿಗೂ ಅಲ್ಲ. ಇದಕ್ಕೆ ಕಾರಣವನ್ನು ಕೇಳು.

೨೬. ಮನ್ಮಥನು ಸುಟ್ಟುಹೋದ ತರುವಾಯ ಮರಳಿ ಅವನು ಹುಟ್ಟುವುದನ್ನು ಕಾಯುತ್ತಿದ್ದ ರತಿಯೇ ಇವಳು. ತನ್ನ ಮಾಯೆಯ ರೂಪದಿಂದ ಈ ಶಂಬರಾಸುರನನ್ನು ಮೋಹಗೊಳಿಸಿದಳು.

೨೭. ಈ ಮದಿರೇಕ್ಷಣೆಯು ಆ ದೈತ್ಯನಿಗೆ ಮೋಹಾದಿ ಉಪಭೋಗಗಳ ಸಮಯದಲ್ಲಿ ತನ್ನ ಮಾಯಾರೂಪವನ್ನು ತೋರ್ಪಡಿಸುತ್ತಾ ಬಂದಿರುವಳು.

ಕಾಮೋಽವತೀರ್ಣಃ ಪುತ್ರಸ್ತೇ ತಸ್ಯೇಯಂ ದಯಿತಾ ರತಿಃ ।
ವಿಶಂಕಾ ನಾತ್ರ ಕರ್ತವ್ಯಾ ಸ್ನುಷೇಯಂ ತವ ಶೋಭನಾ ॥ ೨೮ ॥

॥ ವ್ಯಾಸ ಉವಾಚ ॥

ತತೋ ಹರ್ಷಸಮಾವಿಷ್ಟೌ ರುಕ್ಮಿಣೀಕೇಶವೌ ತದಾ ।
ನಗರೀ ಚ ಸಮಸ್ತಾ ಸಾ ಸಾಧು ಸಾಧ್ವಿತ್ಯಭಾಷತ ॥ ೨೯ ॥

ಚಿರಂ ನಷ್ಟೇನ ಪುತ್ರೇಣ ಸಂಗತಾಂ ಪ್ರೇಕ್ಷ್ಯ ರುಕ್ಮಿಣೀಂ ।
ಅವಾಪ ವಿಸ್ಮಯಂ ಸರ್ವೋ ದ್ವಾರವತ್ಯಾಂ ಜನಸ್ತದಾ ॥ ೩೦ ॥

ಇತಿ ಶ್ರೀಮಹಾಪುರಾಣೇ ಆದಿಬ್ರಾಹ್ಮೇ ಶಂಬರಹೃತಪ್ರದ್ಯುಮ್ನಾ-
ಗಮನವರ್ಣನಂ ನಾಮ ದ್ವಿಶತತಮೋಽಧ್ಯಾಯಃ

---

೨೮. ಆ ಮನ್ಮಥನೇ ನಿನ್ನ ಮಗನಾದ ಪ್ರದ್ಯುಮ್ನನಾಗಿ ಅವತರಿಸಿದನು. ಈ ಮಾಯಾವತಿಯೇ ಮನ್ಮಥನ ಪ್ರಿಯೆಯಾದ ರತಿಯು. ಈ ವಿಷಯದಲ್ಲಿ ಇನ್ನೇನೂ ನೀನು ಸಂಶಯಪಡಬೇಕಾಗಿಲ್ಲ. ಈ ಮಂಗಳಾಂಗಿಯು ನಿನ್ನ ಸೊಸೆಯು ಎಂದನು.

೨೯. ಆಗ ರುಕ್ಮಿಣಿಯೂ ಕೃಷ್ಣನೂ ಬಹುವಾಗಿ ಸಂತೋಷಪಟ್ಟರು. ದ್ವಾರಕಾನಗರಿಯೆಲ್ಲವೂ ಈ ಸಂಗತಿಯನ್ನು ಕೇಳಿ ಭಲೇ, ಭಲೇ ಎಂದು ಕೊಂಡಾಡಿತು.

೩೦. ಹೀಗೆ ಬಹುಕಾಲ ಕಳೆದುಹೋಗಿದ್ದ ತನ್ನ ಮಗನನ್ನು ರುಕ್ಮಿಣಿಯು ಮರಳಿ ಪಡೆದುದನ್ನು ಕಂಡು ದ್ವಾರಕೆಯಲ್ಲಿ ವಾಸಿಸುತ್ತಿದ್ದ ಜನರೆಲ್ಲರಿಗೂ ಬಹು ಆಶ್ಚರ್ಯವಾಯಿತು.

ಇಲ್ಲಿಗೆ ಶ್ರೀಬ್ರಹ್ಮಪುರಾಣದಲ್ಲಿ ಶಂಬರಾಸುರವಧೆಯ ವರ್ಣನವೆಂಬ
ಎರಡನೂರನೆಯ ಅಧ್ಯಾಯವು ಮುಗಿದುದು.



ಶ್ರೀಃ

ಓಂ ತತ್ಸದ್ಬ್ರಹ್ಮಣೇನಮಃ

# ಅಥ ಮಹಾ ಪುರಾಣೇ ಬ್ರಾಹ್ಮೇ

## ಏಕಾಧಿಕದ್ವಿಶತತಮೋऽಧ್ಯಾಯಃ

॥ ವ್ಯಾಸ ಉವಾಚ ॥

**ಚಾರುದೇಷ್ಣಂ ಸುದೇಷ್ಣಂ ಚ ಚಾರುದೇಹಂ ಚ ಶೋಭನಂ ।**
**ಸುಷೇಣಂ ಚಾರುಗುಪ್ತಂ ಚ ಭದ್ರಚಾರುಂ ತಥಾಪರಂ ॥ ೧ ॥**

**ಚಾರುವಿಂದಂ ಸುಚಾರುಂ ಚ ಚಾರುಂ ಚ ಬಲಿನಾಂ ವರಂ ।**
**ರುಕ್ಮಿಣ್ಯಜನಯತ್ಪುತ್ರಾನ್ಕನ್ಯಾಂ ಚಾರುಮತೀಂ ತಥಾ ॥ ೨ ॥**

**ಅನ್ಯಾಶ್ಚ ಭಾರ್ಯಾಃ ಕೃಷ್ಣಸ್ಯ ಬಭೂವುಃ ಸಪ್ತ ಶೋಭನಾಃ ।**
**ಕಾಲಿಂದೀ ಮಿತ್ರವಿಂದಾ ಚ ಸತ್ಯಾ ನಾಗ್ನಜಿತೀ ತಥಾ ॥ ೩ ॥**

---

### ಇನ್ನೂರೊಂದನೆಯ ಅಧ್ಯಾಯವು

೧–೨. ವ್ಯಾಸನು ಹೇಳಿದನು—ರುಕ್ಮಿಣಿಗೆ ಚಾರುದೇಷ್ಣ, ಸುದೇಷ್ಣ ಚಾರುದೇಹ, ಸುಷೇಣ ಚಾರುಗುಪ್ತ, ಭದ್ರಚಾರು, ಚಾರುವಿಂದ, ಸುಚಾರು ಚಾರು ಎಂಬ ಮಹಾಬಲಾಢ್ಯರೂ, ಸುಂದರರೂ ಆದ ಒಂಭತ್ತು ಮಂದಿ ಕುಮಾರರೂ ಚಾರುಮತಿಯೆಂಬ ಕುಮಾರಿಯೊಬ್ಬಳೂ ಜನಿಸಿದರು.

೩-೪. ಕೃಷ್ಣನಿಗೆ ಈ ರುಕ್ಮಿಣಿಯಲ್ಲದೆ ಇನ್ನೂ ಏಳು ಮಂದಿ ಪಟ್ಟ ಮಹಿಷಿಯರಿದ್ದರು. ಅವರು ಯಾರೆಂದರೆ–ಕಾಳಿಂದಿ, ಮಿತ್ರವಿಂದೆ, ಸತ್ಯಭಾಮೆ ನಾಗ್ನಿಜಿತಿ, ಜಾಂಬುವತಿ, ರೋಹಿಣಿ, ಸುಶೀಲಾ ಎಂಬುವರು. ಅವರಲ್ಲಿ ರೋಹಿ

ದೇವೀ ಜಾಂಬವತೀ ಚಾಪಿ ಸದಾ ತುಷ್ಟಾ ತು ರೋಹಿಣೀ ।
ಮದ್ರರಾಜಸುತಾ ಚಾನ್ಯಾ ಸುಶೀಲಾ ಶೀಲಮಂಡಲಾ ॥ ೪ ॥

ಸಾತ್ರಾಜಿತೀ ಸತ್ಯಭಾಮಾ ಲಕ್ಷ್ಮಣಾ ಚಾರುಹಾಸಿನೀ ।
ಷೋಡಶಾತ್ರ ಸಹಸ್ರಾಣಿ ಸ್ತ್ರೀಣಾಮನ್ಯಾನಿ ಚಕ್ರಿಣಃ ॥ ೫ ॥

ಪ್ರದ್ಯುಮ್ನೋಽಪಿ ಮಹಾವೀರ್ಯೋ ರುಕ್ಮಿಣಸ್ತನಯಾಂ ಶುಭಾಂ ।
ಸ್ವಯಂವರಸ್ಥಾಂ ಜಗ್ರಾಹ ಸಾಪಿ ತಂ ತಯನಂ ಹರೇಃ ॥ ೬ ॥

ತಸ್ಯಾಮಸ್ಯಾಭವತ್ಪುತ್ರೋ ಮಹಾಬಲಪರಾಕ್ರಮಃ ।
ಅನಿರುದ್ಧೋ ರಣೇ ರುದ್ಧೋ ವೀರ್ಯೋದಧಿರರಿಂದಮಃ ॥ ೭ ॥

---

ಣಿಯು ಸದಾ ಸಂತೋಷಚಿತ್ತಳು, ಸುಶೀಲೆಯೆಂಬುವಳು (ತನ್ನ ಹೆಸರಿಗೆ ತಕ್ಕಂತೆ) ಶೀಲವನ್ನೇ ಆಭರಣವೆಂದು ಭಾವಿಸಿದ್ದಳು. ಅವಳು ಮದ್ರ ರಾಜನ ಮಗಳು.

೫. ಸತ್ರಾಜಿತನ ಮಗಳಾದ ಸತ್ಯಭಾಮೆಯು ಇವರಲ್ಲೆಲ್ಲಾ ಬಹು ಲಕ್ಷಣವಂತೆಯೂ, ಚೆಲುವಾದ ನಗುವಿನಿಂದ ಕೂಡಿರುವವಳಾಗಿಯೂ ಇದ್ದಳ. ಇದಲ್ಲದೆ ಕೃಷ್ಣನಿಗೆ ಹದಿನಾರುಸಹಸ್ರ ಮಂದಿ ಸ್ತ್ರೀಯರು ಇದ್ದರು.

೬. ಮಹಾವೀರ್ಯಶಾಲಿಯಾದ ಪ್ರದ್ಯುಮ್ನನು ರುಕ್ಮಿಣಿಯ ಮಗಳ ಸಂಯಂವರಕ್ಕೆ ಹೋಗಿ ಅವಳನ್ನು ಪರಿಗ್ರಹಿಸಿದನು. ಅವಳೂ ಸಹ ಪ್ರದ್ಯುಮ್ನನನ್ನೇ ವರಿಸಿದಳು.

೭. ರುಕ್ಮಿಣಿಯ ಮಗಳಲ್ಲಿ ಪ್ರದ್ಯುಮ್ನನಿಗೆ ಮಹಾಬಲನೂ, ಪರಾಕ್ರಮಶಾಲಿಯೂ, ಶತ್ರುಸಂಹಾರಿಯೂ, ಯುದ್ಧದಲ್ಲಿ ತಡೆಯಿಲ್ಲದವನೂ, ವೀರ್ಯಕ್ಕೆ ನಿಧಿಯೂ ಆದ ಅನಿರುದ್ಧಕುಮಾರನು ಉದಯಿಸಿದನು.

ತಸ್ಯಾಪಿ ರುಕ್ಮಿಣಃ ಪೌತ್ರೀ ವರಯಾಮಾಸ ಕೇಶವಃ ।
ದೌಹಿತ್ರಾಯ ದದೌ ರುಕ್ಮೀ ಸ್ಪರ್ಧಯನ್ನಪಿ ಶೌರಿಣಾ ॥ ೮ ॥

ತಸ್ಯಾ ವಿವಾಹೇ ರಾಮಾದ್ಯಾ ಯಾದವಾ ಹರಿಣಾ ಸಹ ।
ರುಕ್ಮಿಣೋ ನಗರಂ ಜಗ್ಮುರ್ನಾಮ್ನಾ ಭೋಜಕಟಂ ದ್ವಿಜಾಃ ॥ ೯ ॥

ವಿವಾಹೇ ತತ್ರ ನಿರ್ವೃತ್ತೇ ಪ್ರಾದ್ಯುಮ್ನೇಃ ಸುಮಹಾತ್ಮನಃ ।
ಕಲಿಂಗರಾಜಪ್ರಮುಖಾ ರುಕ್ಮಿಣಂ ವಾಕ್ಯಮಬ್ರುವನ್ ॥ ೧೦ ॥

॥ ಕಲಿಂಗಾದಯ ಊಚುಃ ॥

ಅನಕ್ಷಜ್ಞೋ ಹಲೀ ದ್ಯೂತೇ ತಥಾಸ್ಯ ವ್ಯಸನಂ ಮಹತ್ ।
ತನ್ನಯಾಮೋ ಬಲಂ ತಸ್ಮಾದ್ದ್ಯೂತೇನೈವ ಮಹಾದ್ಯುತೇ ॥ ೧೧ ॥

---

೮. ತನ್ನ ಮೊಮ್ಮಗನಾದ ಅನಿರುದ್ಧನಿಗೂ ಕೂಡ, ರುಕ್ಮಿಣಿಯು ತನ್ನ ಮಗನ ಮಗಳನ್ನು ಕೊಡುವಂತೆ ಕೃಷ್ಣನು ಕೇಳಿದನು. ರುಕ್ಮಿಣಿಯು ಕೃಷ್ಣನಮೇಲೆ ಸ್ಪರ್ಧಿಸುತ್ತಿದ್ದರೂ ತನ್ನ ದೌಹಿತ್ರ (ಅನಿರುದ್ಧ) ನಿಗೆ ಪೌತ್ರಿಯನ್ನು ಕೊಟ್ಟು ಮದುವೆಮಾಡಿದನು.

೯. ಮದುವೆಯ ಸಂದರ್ಭದಲ್ಲಿ ಬಲರಾಮ ಮೊದಲಾದ ಯಾದವರೆಲ್ಲರೂ ಕೃಷ್ಣನೊಡನೆ ರುಕ್ಮಿಣಿಯ ಊರಾದ ಭೋಜಕಟವೆಂಬ ನಗರಕ್ಕೆ ಬಂದರು.

೧೦. ಅನಿರುದ್ಧನ ಮದುವೆಯೂ ಮುಗಿಯಿತು. ಮದುವೆಗೆ ಬಂದಿದ್ದ ಕಲಿಂಗರಾಜ ಮೊದಲಾದವರು ರುಕ್ಮಿಣಿಯನ್ನು ಕುರಿತು,

೧೧. ಈ ಬಲರಾಮನಿಗೆ ಅಕ್ಷದ (ಪಗಡೆಯ) ಗಂಧವೇ ಇಲ್ಲವು. ಆದರೂ ಇವನಿಗೆ ಜೂಜೆಂದರೆ ಮಹಾ ಗೀಳು ಹಿಡಿದಿದೆ. ಆದ್ದರಿಂದ ಈ ಬಲರಾಮನನ್ನು ಜೂಜಿನಿಂದಲೇ ಗೆದ್ದುಬಿಡೋಣ ಎಂದು ಸೂಚಿಸಿದರು.

॥ ವ್ಯಾಸ ಉವಾಚ ॥

ತಥೇತಿ ತಾನಾಹ ನೃಪಾನ್ರುಕ್ಮೀ ಬಲಸಮನ್ವಿತಃ ।
ಸಭಾಯಾಂ ಸಹ ರಾಮೇಣ ಚಕ್ರೇ ದ್ಯೂತಂ ಚ ವೈ ತದಾ ॥ ೧೨ ॥

ಸಹಸ್ರಮೇಕಂ ನಿಷ್ಕಾಣಾಂ ರುಕ್ಮಿಣಾ ವಿಜಿತೋ ಬಲಃ ।
ದ್ವಿತೀಯೇ ದಿವಸೇ ಚಾನ್ಯತ್ಸಹಸ್ರಂ ರುಕ್ಮಿಣಾ ಜಿತಃ ॥ ೧೩ ॥

ತತೋ ದಶ ಸಹಸ್ರಾಣಿ ನಿಷ್ಕಾಣಾಂ ಪಣಮಾದದೇ ।
ಬಲಭದ್ರಪ್ರಪನ್ನಾನಿ ರುಕ್ಮೀ ದ್ಯೂತವಿದಾಂ ವರಃ ॥ ೧೪ ॥

ತತೋ ಜಹಾಸಾಥ ಬಲಂ ಕಲಿಂಗಾಧಿಪತಿರ್ದ್ವಿಜಾಃ ।
ದಂತಾನ್ನಿದರ್ಶಯನ್ಮೂಢೋ ರುಕ್ಮೀ ಚಾಹ ಮದೋದ್ಧತಃ ॥ ೧೫ ॥

---

೧೨. ಆಗ ರುಕ್ಮಿಯು ಹಾಗೆಯೇ ಆಗಲೆಂದು ಅವರ ಮಾತಿಗೊಪ್ಪಿ ತನ್ನ ಕಡೆಯವರೊಂದಿಗೆ ಸಭೆಯೊಂದನ್ನು ಸೇರಿಸಿ ಬಲರಾಮನೊಡನೆ ಜೂಜಾಡ ತೊಡಗಿದನು.

೧೩. ಆದಿನ ಬಲರಾಮನು ರುಕ್ಮಿಯೊಡನೆ ಜೂಜಾಡಿ, ಸಾವಿರ ಮೊಹರುಗಳನ್ನು ಸೋತನು. ಮಾರನೆಯದಿನವೂ ಅದೇರಿತಿ ಒಂದುಸಾವಿರ ವರಹಗಳನ್ನು ರುಕ್ಮಿಗೆ ಸೋತನು.

೧೪. ಅನಂತರ ಜೂಜಿನಲ್ಲಿ ಚೆನ್ನಾಗಿ ಪಳಗಿದ್ದ ರುಕ್ಮಿಯನ್ನು ಬಲ ರಾಮನು ಆ ದಿನ ಒಡ್ಡಿದ್ದ ಹತ್ತುಸಾವಿರ ವರಹಗಳನ್ನು ಒಂದೇ ಏಟಿಗೆ ಗೆದ್ದುಕೊಂಡನು.

೧೫. ಎಲೈ ದ್ವಿಜರೇ, ಆಗ ಕಲಿಂಗದೇಶಾಧಿಪತಿಯು ಬಲರಾಮನನ್ನು ನೋಡುತ್ತಾ ಹಲ್ಲು ಕಿರಿದು ಅಪಹಾಸ್ಯಮಾಡಿದನು. ಗೆದ್ದೆನೆಂದು ಮದದಿಂದ ಬೀಗುತ್ತಿದ್ದ ರುಕ್ಮಿಯು ಬಲರಾಮನನ್ನು ಕುರಿತು,

॥ ರುಕ್ಮ್ಯುವಾಚ ॥

ಅವಿದ್ಯೋಽಯಂ ಮಹಾದ್ಯೂತೇ ಬಲಭದ್ರಃ ಪರಾಜಿತಃ ।
ಮೃಷೈವಾಕ್ಷಾವಲೇಪತ್ವಾದ್ಯೋಽಯಂ ಮೇನೇಽಕ್ಷಕೋವಿದಂ ॥ ೧೬ ॥

ದೃಷ್ಟ್ವಾ ಕಲಿಂಗರಾಜಂ ತು ಪ್ರಕಾಶದಶನಾನನಂ ।
ರುಕ್ಮಿಣಂ ಚಾಪಿ ದುರ್ವಾಕ್ಯಂ ಕೋಪಂ ಚಕ್ರೇ ಹಲಾಯುಧಃ ॥ ೧೭ ॥

॥ ವ್ಯಾಸ ಉವಾಚ ॥

ತತಃ ಕೋಪಪರೀತಾತ್ಮಾ ನಿಷ್ಕಕೋಟಿಂ ಹಲಾಯುಧಃ ।
ಗ್ಲಹಂ ಜಗ್ರಾಹ ರುಕ್ಮೀ ಚ ತತಸ್ತ್ವಕ್ಷಾನಪಾತಯತ್ ॥ ೧೮ ॥

ಅಜಯದ್ಬಲದೇವೋಽಥ ಪ್ರಾಹೋಚ್ಚೈಸ್ತಂ ಜಿತಂ ಮಯಾ ।
ಮಮೇತಿ ರುಕ್ಮೀ ಪ್ರಾಹೋಚ್ಚೈರಲೀಕೋಕ್ತೈರಲಂ ಬಲಂ ॥ ೧೯ ॥

---

೧೬. ಈ ಬಲರಾಮನಿಗೆ ದ್ಯೂತವಿದ್ಯೆಯೇ ಬಾರದು. ಹೀಗಿದ್ದರೂ ಒಣಜಂಭದಿಂದ ತಾನೇ ಅಕ್ಷದ್ಯೂತಕುಶಲನೆಂದು ಭಾವಿಸಿಬಿಟ್ಟಿದ್ದನು. ಇಂದು ಇವನನ್ನು ಸೋಲಿಸಿಬಿಟ್ಟೆನು ಎಂದನು.

೧೭. ಆಗ ಬಲರಾಮನು, ಎಲ್ಲರಿಗೂ ಕಾಣುವಂತೆ ಹಲ್ಲುಬಿಟ್ಟು ನಗುತ್ತಿದ್ದ ಕಲಿಂಗ ದೇಶದ ಅರಸನನ್ನೂ, ನಿಂದಾವಾಕ್ಯಗಳನ್ನಾಡುತ್ತಿದ್ದ ರುಕ್ಮಿಯನ್ನೂ ಕಂಡು,

೧೮. ಕುಪಿತನಾದ ಬಲಭದ್ರನು ಇಂದು ಕೋಟಿ ವರಹಗಳನ್ನು ಪಣವಾಗಿ ಒಡ್ಡಿದನು. ರುಕ್ಮಿಯು ದಾಳಗಳನ್ನು ಬಿಡತೊಡಗಿದನು

೧೯. ಆಸಲ ಬಲದೇವನು ಗೆದ್ದುಬಿಟ್ಟನು. ಆಗ ಅವನು, ನಾನು ಗೆದ್ದೆನೆಂದು ಗಟ್ಟಿಯಾಗಿ ಕೂಗಿ ಹೇಳಿದನು. ರುಕ್ಮಿಯು ತಾನು ಸೋತಿದ್ದರೂ ಸುಳ್ಳುಸುಳ್ಳಾಗಿಯೇ ತಾನೇ ಗೆದ್ದೆನೆಂದು ಬಲರಾಮನಮೇಲೆ ಕೂಗತೊಡಗಿದನು.

ತ್ವಯೋಕ್ತೋಽಯಂ ಗ್ಲಹಃ ಸತ್ಯಂ ನ ಮಮೈಷೋಽನುಮೋದಿತಃ ।
ಏವಂ ತ್ವಯಾ ಚೇದ್ವಿಜಿತಂ ನ ಮಯಾ ವಿಜಿತಂ ಕಥಂ ॥ ೨೦ ॥

ತತೋಽಂತರಿಕ್ಷೇ ವಾಗುಚ್ಚೈಃ ಪ್ರಾಹ ಗಂಭೀರನಾದಿನೀ ।
ಬಲದೇವಸ್ಯ ತಂ ಕೋಪಂ ವರ್ಧಯಂತೀ ಮಹಾತ್ಮನಃ ॥ ೨೧ ॥

॥ ಆಕಾಶವಾಗುವಾಚ ॥

ಜಿತಂ ತು ಬಲದೇವೇನ ರುಕ್ಮಿಣಾ ಭಾಷಿತಂ ಮೃಷಾ ।
ಅನುಕ್ತ್ವಾ ವಚನಂ ಕಿಂಚಿತ್ಕೃತಂ ಭವತಿ ಕರ್ಮಣಾ ॥ ೨೨ ॥

॥ ವ್ಯಾಸ ಉವಾಚ ॥

ತತೋ ಬಲಃ ಸಮುತ್ಥಾಯ ಕ್ರೋಧಸಂರಕ್ತಲೋಚನಃ ।
ಜಘಾನಾಷ್ಟಾಪದೇನೈವ ರುಕ್ಮಿಣಂ ಸ ಮಹಾಬಲಃ ॥ ೨೩ ॥

---

೨೦. ನೀನು ಈ ಪಣವನ್ನು ಒಡ್ಡಿದುದೇನೋ ದಿಟ, ನಾನಿಲ್ಲವೆನ್ನುವುದಿಲ್ಲ. ಆದರೆ ನಾನು ಇದನ್ನು ಒಪ್ಪಿರಲಿಲ್ಲ. ಹೀಗಿದ್ದರೂ ನೀನೇ ಗೆದ್ದೆನೆಂದು ಹೇಳುವುದಾದರೆ ನಾನೇಕೆ ಗೆಲ್ಲಬಾರದು ? ಎಂದನು.

೨೧. ಬಲರಾಮನ ಕೋಪವನ್ನು ಕೆರಳಿಸುವಂತೆ, ಆಕಾಶದಿಂದ ಅಶರೀರವಾಣಿಯು ಗಂಭೀರವಾಗಿ ಮೊಳಗಿತು.

೨೨. ಗೆದ್ದವನು ಬಲದೇವ, ರುಕ್ಮಿಯು ಹೇಳಿದುದೆಲ್ಲವೂ ಸುಳ್ಳು ಬಾಯಲ್ಲಿ ಯಾರು ಮಾತನಾಡದಿರುವರೋ ಅವರಿಂದಲೇ ಕೆಲಸವು ಸಾಗುವುದು ಎಂದು ವಾಣಿಯು ಹೇಳಿತು.

೨೩. ಬಲರಾಮನಿಗೆ ಕೋಪವುಕ್ಕಿ ಕಣ್ಣುಗಳು ಕೆಂಡದಂತಾದುವು. ಮಹಾಬಲಶಾಲಿಯಾದ ಅವನು ಆಡುತ್ತಿದ್ದ ಪಗಡೇಕಾಯಿನಿಂದಲೇ ರುಕ್ಮಿಯನ್ನು ಹೊಡೆದು ಕೊಂದುಬಿಟ್ಟನು.

**ಕಲಿಂಗರಾಜಂ ಚಾದಾಯ ವಿಸ್ಫುರಂತಂ ಬಲಾದ್ಬಲಃ ।**
**ಬಭಂಜ ದಂತಾನ್ಕುಪಿತೋ ಯೈಃ ಪ್ರಕಾಶಂ ಜಹಾಸ ಸಃ ॥ ೨೪ ॥**

**ಆಕೃಷ್ಯ ಚ ಮಹಾಸ್ತಂಭಂ ಜಾತರೂಪಮಯಂ ಬಲಃ ।**
**ಜಘಾನ ಯೇ ತತ್ಪಕ್ಷಾಸ್ತಾನ್ಭೂಭೃತಃ ಕುಪಿತೋ ಬಲಃ ॥ ೨೫ ॥**

**ತತೋ ಹಾಹಾಕೃತಂ ಸರ್ವಂ ಪಲಾಯನಪರಂ ದ್ವಿಜಾಃ ।**
**ತದ್ರಾಜಮಂಡಲಂ ಸರ್ವಂ ಬಭೂವ ಕುಪಿತೇ ಬಲೇ ॥ ೨೬ ॥**

**ಬಲೇನ ನಿಹತಂ ಶ್ರುತ್ವಾ ರುಕ್ಮಿಣಂ ಮಧುಸೂದನಃ ।**
**ನೋವಾಚ ವಚನಂ ಕಿಂಚಿದ್ರುಕ್ಮಿಣೀಬಲಯೋರ್ಭಯಾತ್ ॥ ೨೭ ॥**

---

೨೪. ಮತ್ತು ಕಳಿಂಗದೇಶದ ಅರಸನಕಡೆ ನುಗ್ಗಿ ಹಿಂದೆ ಅವನು ಯಾವ ಹಲ್ಲುಗಳು ಕಾಣುವಂತೆ ಗಟ್ಟಿಯಾಗಿ ನಕ್ಕಿದ್ದನೋ ಆ ಹಲ್ಲುಗಳೆಲ್ಲವೂ ಮುರಿದುಬೀಳುವಂತೆ ಬಲದಿಂದ ಅಪ್ಪಳಿಸಿ ಹೊಡೆದನು.

೨೫. ಅಲ್ಲದೆ ಕುಪಿತನಾದ ಬಲರಾಮನು ಆ ಸಭೆಯಲ್ಲಿದ್ದ ಚಿನ್ನದ ದೊಡ್ಡ ಕಂಭವನ್ನು ಎಳೆದುಕೊಂಡು ರುಕ್ಮಿ ಮತ್ತು ಕಲಿಂಗರಾಜನ ಕಡೆಯವ ರಾದ ಅರಸರೆಲ್ಲರನ್ನೂ ಸದೆಬಡಿಯ ತೊಡಗಿದನು.

೨೬. ಎಲೈ ಬ್ರಾಹ್ಮಣೋತ್ತಮರರಿರಾ! ಈರೀತಿಯಾಗಿ ಕೋಪದಿಂದ ಕೆಂಡವಾದ ಬಲರಾಮನನ್ನು ಕಂಡು ಅಲ್ಲಿ ಸೇರಿದ್ದ ರಾಜರ ಗುಂಪೆಲ್ಲವೂ ಭಯದಿಂದ ತತ್ತಳಿಸುತ್ತಲೂ ಹಾಹಾಕಾರವನ್ನು ಮಾಡುತ್ತಲೂ ಕಾಲಿಗೆ ಬುದ್ಧಿ ಹೇಳಿತು.

೨೭. ಆಗ ಕೃಷ್ಣನು ಬಲರಾಮನಿಂದ ರುಕ್ಮಿಯು ಹತನಾದನೆಂಬ ಸುದ್ದಿಯಮ್ನ ಕೇಳಿ ಯಾವುದಾದರೂ ಪಕ್ಷವನ್ನು ವಹಿಸಿದರೆ ರುಕ್ಮಿಗಾಗಲೀ ಬಲರಾಮನಿಗಾಗಲೀ ಕೋಪವುಂಟಾಗಬಹುದೆಂಬ ಭಯದಿಂದ ಏನೊಂದೂ ಮಾತನಾಡದೇ ಸುಮ್ಮನೆ ಇದ್ದುಬಿಟ್ಟನು.

**ತತೋಽನಿರುದ್ಧಮಾದಾಯ ಕೃತೋದ್ವಾಹಂ ದ್ವಿಜೋತ್ತಮಾಃ ।**
**ದ್ವಾರಕಾಮಾಜಗಾಮಾಥ ಯದುಚಕ್ರಂ ಸಕೇಶವಂ ॥ ೨೮ ॥**

**ಇತಿ ಶ್ರೀಮಹಾಪುರಾಣೇ ಆದಿಬ್ರಾಹ್ಮೇಽನಿರುದ್ಧವಿವಾಹೇ ರುಕ್ಮಿ-ವಧನಿರೂಪಣಂ ನಾಮೈಕಾಧಿಕದ್ವಿಶತತಮೋಽಧ್ಯಾಯಃ**

---

೨೮. ಎಲೈ ದ್ವಿಜೋತ್ತಮರೇ, ಅನಂತರ ಕೃಷ್ಣನೇ ಮೊದಲಾದ ಆ ಯಾದವರ ಗುಂಪು ಮದುವೆಯಾದ ಅನಿರುದ್ಧನೊಂದಿಗೆ ದ್ವಾರಕಿಗೆ ಮರಳಿ ಬಂದಿತು.

ಇಲ್ಲಿಗೆ ಶ್ರೀ ಬ್ರಹ್ಮಪುರಾಣದಲ್ಲಿ ಅನಿರುದ್ಧನ ವಿವಾಹವರ್ಣನವೆಂಬ ಇನ್ನೂರೊಂದನೆಯ ಅಧ್ಯಾಯವು ಮುಗಿದುದು.

---

ಶ್ರೀಃ

ಓಂ ತತ್ಸದ್ಬ್ರಹ್ಮಣೇನಮಃ

# ಅಥ ಮಹಾಪುರಾಣೇ ಬ್ರಾಹ್ಮೇ

## ದ್ವ್ಯಧಿಕದ್ವಿಶತತಮೋಽಧ್ಯಾಯಃ

॥ ವ್ಯಾಸ ಉವಾಚ ॥

ದ್ವಾರವತ್ಯಾಂ ತತಃ ಶೌರಿಂ ಶಕ್ರಸ್ತ್ರಿಭುವನೇಶ್ವರಃ ।
ಆಜಗಾಮಾಥ ಮುನಯೋ ಮತ್ತೈರಾವತಪೃಷ್ಠಗಃ ॥ ೧ ॥

ಪ್ರವಿಶ್ಯ ದ್ವಾರಕಾಂ ಸೋಽಥ ಸಮೀಪೇ ಚ ಹರೇಸ್ತದಾ ।
ಕಥಯಾಮಾಸ ದೈತ್ಯಸ್ಯ ನರಕಸ್ಯ ವಿಚೇಷ್ಟಿತಂ ॥ ೨ ॥

॥ ಇಂದ್ರ ಉವಾಚ ॥

ತ್ವಯಾ ನಾಥೇನ ದೇವಾನಾಂ ಮನುಷ್ಯತ್ವೇಽಪಿ ತಿಷ್ಠತಾ ।
ಪ್ರಶಮಂ ಸರ್ವದುಃಖಾನಿ ನೀತಾನಿ ಮಧುಸೂದನ ॥ ೩ ॥

---

### ಇನ್ನೂರೆರಡನೆಯ ಅಧ್ಯಾಯವು

೧. ವ್ಯಾಸನು ಹೇಳಿದನು—ಎಲೈ ಮುನಿಗಳಿರಾ! ಒಂದಾನೊಂದು ದಿವಸ, ತ್ರಿಲೋಕಾಧಿಪತಿಯಾದ ಇಂದ್ರನು ತನ್ನ ಐರಾವತವೆಂಬ ಮದ್ದಾನೆಯನ್ನು ಹತ್ತಿಕೊಂಡು ಶ್ರೀಕೃಷ್ಣನನ್ನು ನೋಡಬೇಕೆಂದು ದ್ವಾರಾವತಿಗೆ ಬಂದನು.

೨. ಆಗ ಅವನು ದ್ವಾರಕೆಯಲ್ಲಿ ಕೃಷ್ಣನಿಗೆ, ದೈತ್ಯನಾದ ತಾರಕಾಸುರನ ಚರಿತ್ರೆಯನ್ನು ಹೇಳಿದನು.

೩. ಎಲೈ ಮಧುಸೂದನನೇ, ದೇವಪ್ರಭುವಾದ ನೀನು ಮನುಷ್ಯನಂತೆ ಶರೀರವನ್ನು ಧರಿಸಿದ್ದರೂ, ಎಲ್ಲರ ದುಃಖಗಳನ್ನೂ ಶಮನಗೊಳಿಸುವೆ.

ತಪಸ್ವಿಜನರಕ್ಷಾಯೈ ಸೋಽರಿಷ್ಟೋ ಧೇನುಕಸ್ತಥಾ ।
ಪ್ರಲಂಬಾದ್ಯಾಸ್ತಥಾ ಕೇಶೀ ತೇ ಸರ್ವೇ ನಿಹತಾಸ್ತ್ವಯಾ ॥ ೪ ॥

ಕಂಸಃ ಕುವಲಯಾಪೀಡಃ ಪೂತನಾ ಬಾಲಘಾತಿನೀ ।
ನಾಶಂ ನೀತಾಸ್ತ್ವಯಾ ಸರ್ವೇ ಯೇಽನ್ಯೇ ಜಗದುಪದ್ರವಾಃ ॥ ೫ ॥

ಯುಷ್ಮದ್ದೋರ್ದಂಡಸಂಬುದ್ಧಿಪರಿತ್ರಾತೇ ಜಗತ್ತ್ರಯೇ ।
ಯಜ್ಞೇ ಯಜ್ಞಹವಿಃ ಪ್ರಾಶ್ಯ ತೃಪ್ತಿಂ ಯಾಂತಿ ದಿವೌಕಸಃ ॥ ೬ ॥

ಸೋಽಹಂ ಸಾಂಪ್ರತಮಾಯಾತೋ ಯನ್ನಿಮಿತ್ತಂ ಜನಾರ್ದನ ।
ತಚ್ಛ್ರುತ್ವಾ ತತ್ಪ್ರತೀಕಾರಪ್ರಯತ್ನಂ ಕರ್ತುಮರ್ಹಸಿ ॥ ೭ ॥

---

೪. ತಪಸ್ವಿಗಳನ್ನು ಸಂರಕ್ಷಿಸುವ ಸಲುವಾಗಿ ಅರಿಷ್ಟ, ಧೇನುಕ, ಪ್ರಲಂಬ ಮೊದಲಾದ ಪ್ರಬಲರಾಕ್ಷಸರೆಲ್ಲರೂ ನಿನ್ನಿಂದ ಸಂಹೃತರಾಗಿರುವರು.

೫. ಅದೇರೀತಿಯಾಗಿ ಕಂಸನೂ, ಕುವಲಯಾಪೀಡವೆಂಬ ಆನೆಯೂ ಶಿಶುಗಳಿಗೆ ಮೃತ್ಯುವೆನಿಸಿದ ಪೂತನಿಯೂ ಮತ್ತು ಇನ್ನೂ ಯಾರಾರು ಜಗತ್ತಿಗೆ ಕಂಟಕಪ್ರಾಯರಾಗಿದ್ದರೋ ಅವರೂ, ಎಲ್ಲರೂ ನಿನ್ನದೆಸೆಯಿಂದಲೇ ನಾಶಕ್ಕೆ ಗುರಿಯಾದರು.

೬. ನಿನ್ನ ಬಾಹುಬಲದಿಂದಲೂ ಬುದ್ಧಿಬಲದಿಂದಲೂ, ಮೂರು ಲೋಕಗಳೂ ಈರೀತಿಯಾಗಿ ಸುರಕ್ಷಿತವಾಗಿರುವುದರಿಂದಲೇ ದೇವತೆಗಳು ಯಜ್ಞಗಳಲ್ಲಿ ತಮಗೆ ಸಲ್ಲತಕ್ಕ ಹವಿರ್ಭಾಗವನ್ನು ಪಡೆದು ತೃಪ್ತಿಯನ್ನು ಹೊಂದುತ್ತಿರುವರನು.

೭. ಓ ಜನಾರ್ದನ! ಈಗ ನಾನಿಲ್ಲಿಗೆ ಏತಕ್ಕೆ ಬಂದಿರುವೆನೆಂಬುದನ್ನು ಅರಿತು ಬಳಿಕ ಅದಕ್ಕೆ ಮಾಡತಕ್ಕ ಪ್ರತೀಕಾರಕ್ಕೆ ನೀನು ಪ್ರಯತ್ನಗಳನ್ನು ಮಾಡುವವನಾಗು.

ಭೌಮೋಽಯಂ ನರಕೋ ನಾಮ ಪ್ರಾಗ್ಜ್ಯೋತಿಷಪುರೇಶ್ವರಃ ।
ಕರೋತಿ ಸರ್ವಭೂತಾನಾಮುಪಘಾತಮರಿಂದಮ ॥ ೮ ॥

ದೇವಸಿದ್ಧಸುರಾದೀನಾಂ ನೃಪಾಣಾಂ ಚ ಜನಾರ್ದನ ।
ಹತ್ವಾ ತು ಸೋಽಸುರಃ ಕನ್ಯಾಂ ರುರೋಧ ನಿಜಮಂದಿರೇ ॥ ೯ ॥

ಛತ್ರಂ ಯತ್ಸಲಿಲಸ್ರಾವಿ ತಜ್ಜಹಾರ ಪ್ರಚೇತಸಃ ।
ಮಂದರಸ್ಯ ತಥಾ ಶೃಂಗಂ ಹೃತವಾನ್ಮಣಿಪರ್ವತಂ ॥ ೧೦ ॥

ಅಮೃತಸ್ರಾವಿಣೀ ದಿವ್ಯೇ ಮಾತುರ್ಮೇಽಮೃತಕುಂಡಲೇ ।
ಜಹಾರ ಸೋಽಸುರೋಽದಿತ್ಯಾ ವಾಂಛತ್ಯೈರಾವತಂ ದ್ವಿಪಂ ॥ ೧೧ ॥

---

೮. ಎಲೈ ಅರಿಂದಮ! ಭೂಪುತ್ರನಾದ ನರಕಾಸುರನೆಂಬ ಪ್ರಾಗ್ಜ್ಯೋತಿಷನಗರಾಧಿಪತಿಯಾದ ದೈತ್ಯನು ಸಕಲ ಪ್ರಾಣಿಗಳಿಗೂ ಕಿರುಕುಗಳನ್ನು ಕೊಡುತ್ತಿರುವನು.

೯. ಆ ದೈತ್ಯನು ದೇವತೆಗಳನ್ನೂ ಸಿದ್ಧರನ್ನೂ ಅನೇಕ ಸುರರನ್ನೂ ಕೊಂದು ಅವರ ಕನ್ಯೆಯರನ್ನು ಅಪಹರಿಸಿಕೊಂಡು ಬಂದು ತನ್ನ ಮನೆಯಲ್ಲಿ ಸೆರೆಯಿಟ್ಟಿರುವನು.

೧೦. ಅಲ್ಲದೆ, ವರುಣನ ತಲೆಯಮೇಲೆ ಯಾವಾಗಲೂ ನೀರನ್ನು ಸೂಸುತ್ತಾ ರಾರಾಜಿಸುತ್ತಿದ್ದ ಬೆಳ್ಗೊಡೆಯನ್ನೂ, ಮಣಿಪರ್ವತವೆಂದು ಪ್ರಸಿದ್ಧವಾದ ಮಂದರಪರ್ವತದ ಶಿಖರವನ್ನೂ ಅಪಹರಿಸಿಕೊಂಡು ಹೋಗಿರುವನು.

೧೧. ಮತ್ತು ನನ್ನ ತಾಯಿಯಾದ ಅದಿತಿಯು ಸರ್ವದಾ ಧರಿಸಿರುತ್ತಿದ್ದ, ಅಮೃತವನ್ನು ಚೆಲ್ಲುತ್ತಿದ್ದ ದಿವ್ಯವಾದ ಅಮೃತಕುಂಡಲಗಳನ್ನು ಅಪಹರಿಸಿರುವನಲ್ಲದೆ ನನ್ನ ಈ ಐರಾವತವೆಂಬ ಆನೆಯನ್ನೂ ಬಯಸುತ್ತಿರುವನು.

**ದುರ್ನೀತಮೇತದ್ಗೋವಿಂದ ಮಯಾ ತಸ್ಯ ತವೋದಿತಂ ।**
**ಯದತ್ರ ಪ್ರತಿಕರ್ತವ್ಯಂ ತತ್ಸ್ವಯಂ ಪರಿಮೃಶ್ಯತಾಂ ॥ ೧೨ ॥**

**॥ ವ್ಯಾಸ ಉವಾಚ ॥**

**ಇತಿ ಶ್ರುತ್ವಾ ಸ್ಮಿತಂ ಕೃತ್ವಾ ಭಗವಾನ್ದೇವಕೀಸುತಃ ।**
**ಗೃಹೀತ್ವಾ ವಾಸವಂ ಹಸ್ತೇ ಸಮುತ್ತಸ್ಥೌ ವರಾಸನಾತ್ ॥ ೧೩ ॥**

**ಸಂಚಿಂತಿತಮುಪಾರುಹ್ಯ ಗರುಡಂ ಗಗನೇಚರಂ ।**
**ಸತ್ಯಭಾಮಾಂ ಸಮಾರೋಪ್ಯ ಯಯೌ ಪ್ರಾಗ್ಜ್ಯೋತಿಷಂ ಪುರಂ ॥ ೧೪ ॥**

**ಆರುಹ್ಯೈರಾವತಂ ನಾಗಂ ಶಕ್ರೋऽಪಿ ತ್ರಿದಶಾಲಯಂ ।**
**ತತೋ ಜಗಾಮ ಸುಮನಾಃ ಪಶ್ಯತಾಂ ದ್ವಾರಕೌಕಸಾಂ ॥ ೧೫ ॥**

---

೧೨. ಎಲೈ ಗೋವಿಂದನೇ, ಆ ನರಕಾಸುರನ ದುಷ್ಟನಡೆವಳಿಕೆಯನ್ನು ನಿನಗೆ ತಿಳಿಸಿರುವೆನು. ಇದಕ್ಕೆ ಏನು ಮಾಡಬೇಕೆಂಬುದನ್ನು ನೀನೇ ನಿರ್ಣಯಿಸಬೇಕು ಎಂದನು.

೧೩. ಈರೀತಿಯಾಗಿ ಇಂದ್ರನು ಹೇಳಿದ ಮಾತನ್ನು ಕೇಳಿ ದೇವಕಿಯ ಸುಪುತ್ರನಾದ ಭಗವಂತನು ಆತನ ಕೈಯನ್ನು ಹಿಡಿದು ತನ್ನ ಶ್ರೇಷ್ಠವಾದ ಆಸನದಿಂದ ಮೇಲಕ್ಕೆದ್ದನು.

೧೪. ಒಡನೆಯೇ ಗಗನ ವಿಹಾರಿಯಾದ ತನ್ನ ವಾಹನವಾದ ಗರುಡನನ್ನು ಸ್ಮರಿಸಿದನು. ಕೂಡಲೇ ಅಲ್ಲಿ ಸನ್ನಿಹಿತನಾದ ಗರುಡನಮೇಲೆ ಸತ್ಯಭಾಮೆಯನ್ನೂ ಜೊತೆಯಲ್ಲಿ ಕುಳ್ಳಿರಿಸಿಕೊಂಡು ಪ್ರಾಗ್ಜ್ಯೋತಿಷ ನಗರಕ್ಕೆ ಹೊರಟನು.

೧೫. ಹೀಗೆ ತನ್ನ ಮಾತಿಗೆ ಮನ್ನಣೆಯಿತ್ತು ಶ್ರೀಕೃಷ್ಣನು ಹೊರಟುದನ್ನು ಕಂಡು ಇಂದ್ರನು ಸಂತೋಷವನ್ನು ತಾಳಿ, ದ್ವಾರಕಾ ನಿವಾಸಿಗಳೆಲ್ಲರೂ ನೋಡುತ್ತಿರುವಂತೆಯೇ ತನ್ನಾನೆಯಾದ ಐರಾವತವನ್ನೇರಿ ಸ್ವರ್ಗಲೋಕಕ್ಕೆ ತೆರಳಿದನು.

ಪ್ರಾಗ್ಜ್ಯೋತಿಷಪುರಸ್ಯಾಸ್ಯ ಸಮಂತಾಚ್ಛತಯೋಜನಂ ।
ಆಚಿತಂ ಭೈರವೈಃ ಪಾಶೈಃ ಪರಸೈನ್ಯನಿವಾರಣೇ ॥ ೧೬ ॥

ತಾಂಶ್ಛಿಚ್ಛೇದ ಹರಿಃ ಪಾಶಾನ್ಕ್ಷಿಪ್ತ್ವಾ ಚಕ್ರಂ ಸುದರ್ಶನಂ ।
ತತೋ ಮುರಃ ಸಮುತ್ತಸ್ಥೌ ತಂ ಜಘಾನ ಚ ಕೇಶವಃ ॥ ೧೭ ॥

ಮುರೋಸ್ತು ತನಯಾನ್ಸಪ್ತ ಸಹಸ್ರಾಸ್ತಾಂಸ್ತತೋ ಹರಿಃ ।
ಚಕ್ರಧಾರಾಗ್ನಿನಿರ್ದಗ್ಧಾಂಶ್ಚಕಾರ ಶಲಭಾನಿವ ॥ ೧೮ ॥

ಹತ್ವಾ ಮುರಂ ಹಯಗ್ರೀವಂ ತಥಾ ಪಂಚಜನಂ ದ್ವಿಜಾಃ ।
ಪ್ರಾಗ್ಜ್ಯೋತಿಷಪುರಂ ಧೀಮಾಂಸ್ತ್ವರಾವಾನ್ಸಮುಪಾದ್ರವತ್ ॥ ೧೯ ॥

ನರಕೇನಾಸ್ಯ ತತ್ರಾಭೂನ್ಮಹಾಸೈನ್ಯೇನ ಸಂಯುಗಃ ।
ಕೃಷ್ಣಸ್ಯ ಯತ್ರ ಗೋವಿಂದೋ ಜಘ್ನೇ ದೈತ್ಯಾನ್ಸಹಸ್ರಶಃ ॥ ೨೦ ॥

---

೧೬. ಆ ಪ್ರಾಗ್ಜ್ಯೋತಿಷ ನಗರಕ್ಕೆ ಶತ್ರುಗಳು ಯಾರೂ ಬಾರದಿರುವಂತೆ ನಗರದ ಸುತ್ತಲೂ ನೂರುಯೋಜನಗಳಷ್ಟು ಪ್ರದೇಶವು ಭಯಂಕರವಾದ ಪಾಶಗಳಿಂದ ಬಿಗಿಯಲ್ಪಟ್ಟಿತ್ತು.

೧೭. ಶ್ರೀಕೃಷ್ಣನು ತನ್ನ ಸುದರ್ಶನ ಚಕ್ರದಿಂದ ಆ ಪಾಶಗಳೆಲ್ಲವನ್ನೂ ಕತ್ತರಿಸಿಬಿಟ್ಟನು. ಅದನ್ನು ಕಂಡು ಮುರನೆಂಬ ಅಸುರನು ಕೃಷ್ಣನಮೇಲೆ ಏರಿಬರಲು ಆ ಅಸುರನನ್ನು ಕೊಂದುಬಿಟ್ಟನು.

೧೮. ಆಗ ಮುರಾಸುರನ ಏಳುಸಹಸ್ರಮಂದಿ ಮಕ್ಕಳು ತಮ್ಮ ತಂದೆಯನ್ನು ಕೊಂದನೆಂಬ ಕೋಪದಿಂದ ಕೃಷ್ಣನಮೇಲೆ ಒಟ್ಟಾಗಿ ಯುದ್ಧಮಾಡಲು ಬಂದು, ಕೃಷ್ಣನ ಸುದರ್ಶನ ಚಕ್ರದ ತೀಕ್ಷ್ಣವಾದ ಅಲುಗೆಂಬ ಬೆಂಕಿಗೆ ಸಿಕಿ ಶಲಭಗಳಂತೆ ಸುಟ್ಟುಹೋದರು.

೧೯. ಈರೀತಿಯಾಗಿ ತನ್ನೊಡನೆ ಸೆಣಸಬಂದ ಮುರನನ್ನೂ, ಹಯಗ್ರೀವನನ್ನೂ, ಪಂಚಜನನನ್ನೂ ಕೊಂದು, ಅ ರಣಪಂಡಿತನಾದ ಶ್ರೀಕೃಷ್ಣನು ಪ್ರಾಗ್ಜ್ಯೋತಿಷ ನಗರಕ್ಕೆ ಮಹಾವೇಗದಿಂದ ನುಗ್ಗಿಬಂದನು.

೨೦. ಆಗ ಪ್ರಾಗ್ಜ್ಯೋತಿಷ ನಗರದಲ್ಲಿ ನರಕಾಸುರನು ತನ್ನ ಭಾರಿ ಸೇನೆಯೊಡನೆ, ಕೂಡಿಕೊಂಡು ಕೃಷ್ಣನೊಡನೆ ಹೋರಾಡಿದನು. ಆ ಯುದ್ಧದಲ್ಲಿ ಕೃಷ್ಣನು ಸಾವಿರಗಟ್ಟಲೆ ದೈತ್ಯವೀರರನ್ನು ಸಂಹರಿಸಿದನು.

ಶಸ್ತ್ರಾಸ್ತ್ರವರ್ಷಂ ಮುಂಚಂತಂ ಸ ಭೌಮಂ ನರಕಂ ಬಲೀ ।
ಕ್ಷಿಪ್ತ್ವಾ ಚಕ್ರಂ ದ್ವಿಧಾ ಚಕ್ರೇ ಚಕ್ರೀ ದೈತೇಯಚಕ್ರಹಾ　　॥ ೨೧ ॥

ಹತೇ ತು ನರಕೇ ಭೂಮಿರ್ಗೃಹೀತ್ವಾದಿತಿಕುಂಡಲೇ ।
ಉಪತಸ್ಥೇ ಜಗನ್ನಾಥಂ ವಾಕ್ಯಂ ಚೇದಮಥಾಬ್ರವೀತ್　　॥ ೨೨ ॥

॥ ಧರಣ್ಯುವಾಚ ॥

ಯದಾಹಮುದ್ಧೃತಾ ನಾಥ ತ್ವಯಾ ಶೂಕರಮೂರ್ತಿನಾ ।
ತ್ವತ್ಸಂಸ್ಪರ್ಶಭವಃ ಪುತ್ರಸ್ತದಾಯಂ ಮಯ್ಯಜಾಯತ　　॥ ೨೩ ॥

ಸೋಽಯಂ ತ್ವಯೈವ ದತ್ತೋ ಮೇ ತ್ವಯೈವ ವಿನಿಪಾತಿತಃ ।
ಗೃಹಾಣ ಕುಂಡಲೇ ಚೇಮೇ ಪಾಲಯಾಸ್ಯ ಚ ಸಂತತಿಂ　　॥ ೨೪ ॥

---

೨೧. ಆ ಭೂಪುತ್ರನಾದ ನರಕಾಸುರನು ನಾನಾವಿಧವಾದ ಆಯುಧಗಳನ್ನೂ ಅಸ್ತ್ರಗಳನ್ನೂ ಪ್ರಯೋಗಿಸಿದನು. ಆದರೇನು? ಒಟ್ಟೊಟ್ಟಿಗೆ ದೈತ್ಯರನ್ನು ಕೊಂದು ಕೆಡಹಿದ ಮಹಾಬಲಾಢ್ಯನಾದ ಶ್ರೀಕೃಷ್ಣನು ತನ್ನ ಚಕ್ರವನ್ನು ಬೀಸಿ ಬಿಟ್ಟು ಕ್ಷಣಮಾತ್ರದಲ್ಲಿ ಅಸುರನನ್ನು ಎರಡು ತುಂಡು ಮಾಡಿದನು.

೨೨. ನರಕಾಸುರನು ಹತವಾದುದನ್ನು ಕಂಡು ಭೂದೇವಿಯು ಅದಿತಿಯ ಕುಂಡಲಗಳನ್ನು ತೆಗೆದುಕೊಂಡು ಬಂದು ಜಗತ್ಪತಿಯಾದ ಶ್ರೀಕೃಷ್ಣನಿಗೆ ಒಪ್ಪಿಸಿ ಈರೀತಿ ಹೇಳಿದಳು.

೨೩. ನಾಥ, ಸಾಗರತಲದಲ್ಲಿ ಮುಳುಗಿಹೋಗುತ್ತಿದ್ದ ನನ್ನನ್ನು ಸೂಕರ ರೂಪ (ವರಾಹ) ವನ್ನು ಧರಿಸಿ ನೀನು ಉದ್ಧಾರಮಾಡಿದೆಯಲ್ಲವೆ? ಆ ಸಮಯದಲ್ಲಿ ನಿನ್ನ ಸಂಸ್ಪರ್ಶದಿಂದ ಈ ನರಕಾಸುರನು ನನಗೆ ಮಗನಾಗಿ ಜನಿಸಿದನು.

೨೪. ಈ ನರಕಾಸುರನು ನನಗೆ ನಿನ್ನಿಂದಲೇ ಕೊಡಲ್ಪಟ್ಟನು. ಈಗ ನಿನ್ನಿಂದಲೇ ಸಂಹರಿಸಲ್ಪಟ್ಟನು. ಅದಿತಿದೇವಿಯ ಈ ಕುಂಡಲಗಳನ್ನು ಸ್ವೀಕರಿಸು. ಈ ನರಕನ ವಂಶೀಯರನ್ನು ಕಾಪಾಡು.

ಭಾರಾವತರಣಾರ್ಥಾಯ ಮಮ್ಯೈವ ಭಗವಾನಿಮಂ ।
ಅಂಶೇನ ಲೋಕಮಾಯಾತಃ ಪ್ರಸಾದಸುಮುಖ ಪ್ರಭೋ ॥ ೨೫ ॥

ತ್ವಂ ಕರ್ತಾ ಚ ವಿಕರ್ತಾ ಚ ಸಂಹರ್ತಾ ಪ್ರಭವೋಽವ್ಯಯಃ ।
ಜಗತ್ಸ್ವರೂಪೋ ಯಚ್ಚ ತ್ವಂ ಸ್ತೂಯಸೇಽಚ್ಯುತ ಕಿಂ ಮಯಾ ॥ ೨೬ ॥

ವ್ಯಾಪೀ ವ್ಯಾಪ್ಯಃ ಕ್ರಿಯಾ ಕರ್ತಾ ಕಾರ್ಯಂ ಚ ಭಗವಾನ್ಸದಾ ।
ಸರ್ವಭೂತಾತ್ಮಭೂತಾತ್ಮಾ ಸ್ತೂಯಸೇಽಚ್ಯುತ ಕಿಂ ಮಯಾ ॥ ೨೭ ॥

ಪರಮಾತ್ಮಾ ತ್ವಮಾತ್ಮಾ ಚ ಭೂತಾತ್ಮಾ ಚಾವ್ಯಯೋ ಭವಾನ್ ।
ಯದಾ ತದಾ ಸ್ತುತಿರ್ನಾಸ್ತಿ ಕಿಮರ್ಥಂ ತೇ ಪ್ರವರ್ತತಾಂ ॥ ೨೮ ॥

---

೨೫. ಎಲೈ ಭಗವಂತನೇ, ನನ್ನ ಭಾರವನ್ನು ನೀಗುವಸಲುವಾಗಿಯೇ ನೀನು ಅಂಶರೂಪದಿಂದ ಈ ಭೂಮಿಯಲ್ಲಿ ಅವತಾರವೆತ್ತಿ ಇವನನ್ನು ನಿಗ್ರಹಿಸಿರುವೆ.

೨೬. ಎಲೈ ಅಚ್ಯುತನೇ, ನೀನೇ ಕರ್ತೃವು. ನೀನೇ ಪ್ರತಿಯೊಂದನ್ನೂ ವಿಕಾರಗೊಳಿಸುವವನು. ಮತ್ತು ಜಗತ್ತು ಸೃಷ್ಟಿಯಾಗುವುದೂ, ನಿನ್ನಿಂದಲೇ. ನಾಶವನ್ನು ಪಡೆಯುವುದೂ ನಿನ್ನಿಂದಲೇ. ನಿನ್ನನ್ನು ನಾಶವಿಲ್ಲದವನೆಂದೂ, ಜಗತ್ಸ್ವರೂಪನೆಂದೂ ಹೇಳುವರು. ಇಂತಹ ನಿನ್ನನ್ನು ನಾನೆಂತು ಸ್ತೋತ್ರ ಮಾಡುವೆನು ?

೨೭. ಹೇ ಭಗವನ್, ವ್ಯಾಪಕವೂ, ವ್ಯಾಪ್ಯವೂ, ಕ್ರಿಯೆಯೂ, ಕರ್ತೃವೂ, ಕಾರ್ಯವೂ, ಸರ್ವಭೂತಗಳ ಅಂತರಾತ್ಮನೂ ಆದ ನಿನ್ನನ್ನು ನಾನು ಹೇಗೆ ಸ್ತೋತ್ರಮಾಡಬಲ್ಲೆನು ?

೨೮. ನೀನೇ ಪರಮಾತ್ಮನು, ನೀನೇ ಜೀವಾತ್ಮನು. ಸಕಲ ಭೂತಗಳಲ್ಲಿ ನೆಲೆಸಿರುವವನೂ ನೀನೇ, ನಾಶರಹಿತನೂ ನೀನೇ. ನಿನಗೆ ಈಗ, ಆಗ ಎಂಬ ಕಾಲದ ವ್ಯವಸ್ಥೆಯು ಇಲ್ಲವು. ಇಂತಹ ನಿನ್ನಲ್ಲಿ ಸ್ತುತಿಯೆಂಬುದು ಹೇಗೆ ತಾನೆ ಸಾಧ್ಯವಾದೀತು ?

**ಪ್ರಸೀದ ಸರ್ವಭೂತಾತ್ಮನ್ನರಕೇನ ಕೃತಂ ಚ ಯತ್ ।**
**ತತ್ಕ್ಷಮ್ಯತಾಮದೋಷಾಯ ಮತ್ಸುತಃ ಸ ನಿಪಾತಿತಃ ॥ ೨೯ ॥**

**॥ ವ್ಯಾಸ ಉವಾಚ ॥**

**ತಥೇತಿ ಚೋಕ್ತ್ವಾ ಧರಣೀಂ ಭಗವಾನ್ಭೂತಭಾವನಃ ।**
**ರತ್ನಾನಿ ನರಕಾವಾಸಾಜ್ಜಗ್ರಾಹ ಮುನಿಸತ್ತಮಾಃ ॥ ೩೦ ॥**

**ಕನ್ಯಾಪುರೇ ಸ ಕನ್ಯಾನಾಂ ಷೋಡಶಾತುಲವಿಕ್ರಮಃ ।**
**ಶತಾಧಿಕಾನಿ ದದೃಶೇ ಸಹಸ್ರಾಣಿ ದ್ವಿಜೋತ್ತಮಾಃ ॥ ೩೧ ॥**

**ಚತುರ್ದಂಷ್ಟ್ರಾನ್ಗಜಾಂಶ್ಚೋಗ್ರಾನ್ಷಟ್ಸಹಸ್ರಾಣಿ ದೃಷ್ಟವಾನ್ ।**
**ಕಾಂಬೋಜಾನಾಂ ತಥಾಶ್ವಾನಾಂ ನಿಯುತಾನ್ಯೇಕವಿಂಶತಿಂ ॥ ೩೨ ॥**

---

೨೯. ಎಲೈ ಸರ್ವಭೂತಾಂತರಾತ್ಮನೇ! ಪ್ರಸನ್ನನಾಗು. ನರಕನು ಮಾಡಿರುವ ಅಪರಾಧವನ್ನು ಕ್ಷಮಿಸು. ಆ ನನ್ನ ಮಗನು ಜಗತ್ಕಲ್ಯಾಣಕ್ಕೋಸ್ಕರವಾಗಿಯೇ ಸಂಹರಿಸಲ್ಪಟ್ಟನೆಂಬುದನ್ನು ಅರಿತಿರುವೆನು ಎಂದಳು.

೩೦. ಎಲೈ ಬ್ರಾಹ್ಮಣೋತ್ತಮರಿರಾ! ಹೀಗೆ ಭೂದೇವಿಯು ಪ್ರಾರ್ಥಿಸಲು ಭಗವಂತನು ಹಾಗೆಯೇ ಆಗಲೆಂದು ಅನುಗ್ರಹಿಸಿ, ನರಕಾಸುರನ ಬಳಿಯಲ್ಲಿದ್ದ ರತ್ನಗಳೆಲ್ಲವನ್ನೂ ತೆಗೆದುಕೊಂಡನು.

೩೧. ಬಳಿಕ ಆ ಎಣೆಯಿಲ್ಲದ ಪರಾಕ್ರಮಶಾಲಿಯು ಅಸುರನ ಅಂತಃಪುರಕ್ಕೆ ಹೋಗಿ ಅಲ್ಲಿದ್ದ ಹದಿನಾರುಸಾವಿರದ ಒಂದುನೂರು ಮಂದಿ ಸೆರೆಹಿಡಿದು ತಂದಿದ್ದ ಕನ್ಯೆಯರನ್ನು ಕಂಡನು.

೩೨. ಮತ್ತು ಅತನ ಆರುಸಾವಿರ ಆನೆಗಳನ್ನು ಕಂಡನು. ಅವು ಒಂದೊಂದೂ ನಾಲ್ಕು ಕೊಂಬುಗಳುಳ್ಳವಾಗಿ ನೋಡಿದವರೆ ಹೆದರಿಕೆಯಾಗುವಂತಿದ್ದುವು. ಇದೂ ಅಲ್ಲದೆ ಕಾಂಬೋಜದೇಶದಲ್ಲಿ ಹುಟ್ಟಿದ ಇಪ್ಪತ್ತೊಂದು ನಿಯುತಗಳಷ್ಟು ಸಂಖ್ಯೆಯುಳ್ಳ ಉತ್ತಮಾಶ್ವಗಳನ್ನೂ ಅವನು ನೋಡಿದನು.

ಕನ್ಯಾಸ್ತಾಶ್ಚ ತಥಾ ನಾಗಾಂಸ್ತಾನಶ್ವಾನ್ದ್ವಾರಕಾಂ ಪುರೀಂ ।
ಪ್ರಾಪಯಾಮಾಸ ಗೋವಿಂದಃ ಸದ್ಯೋ ನರಕಕಿಂಕರೈಃ ॥ ೩೩ ॥

ದದೃಶೇ ವಾರುಣಂ ಛತ್ರಂ ತಥೈವ ಮಣಿಪರ್ವತಂ ।
ಆರೋಪಯಾಮಾಸ ಹರಿರ್ಗರುಡೇ ಪತಗೇಶ್ವರೇ ॥ ೩೪ ॥

ಆರುಹ್ಯ ಚ ಸ್ವಯಂ ಕೃಷ್ಣಃ ಸತ್ಯಭಾಮಾಸಹಾಯವಾನ್ ।
ಅದಿತ್ಯಾಃ ಕುಂಡಲೇ ದಾತುಂ ಜಗಾಮ ತ್ರಿದಶಾಲಯಂ ॥ ೩೫ ॥

ಇತಿ ಮಹಾಪುರಾಣೇ ಆದಿಬ್ರಾಹ್ಮೇ ಕೃಷ್ಣಚರಿತೇ ನರಕವಧೋ
ನಾಮ ದ್ವ್ಯಧಿಕದ್ವಿಶತತಮೋಽಧ್ಯಾಯಃ

---

೩೩. ಕೂಡಲೇ ಗೋವಿಂದನು ಆ ಕನ್ಯೆಯರನ್ನೂ ಆನೆ ಕುದುರೆಗಳನ್ನೂ ನರಕಾಸುರನ ಸೇವಕರಿಂದ ದ್ವಾರಕೆಗೆ ಕಳುಹಿಸಿದನು.

೩೪–೩೫. ಬಳಿಕ ಕೃಷ್ಣನು ಹಿಂದೆ ನರಕಾಸುರನು ಅಪಹರಿಸಿ ತಂದಿದ್ದ ವರುಣನ ಛತ್ರಿಯನ್ನೂ ಮಂದರದ ಮಣಿಪರ್ವತವೆಂಬ ಶಿಖರವನ್ನೂ ಗರುಡನ ಮೇಲೆ ಹೊರಿಸಿ, ತಾನೂ ಸತ್ಯಭಾಮೆಯೊಡನೆ ಅವನ ಬೆನ್ನೇರಿ ಕುಳಿತು, ಅದಿತಿಯ ಕುಂಡಲಗಳನ್ನು ಹಿಂಧಿರುಗಿ ಕೊಡುವ ಸಲುವಾಗಿ ಅಮರಾವತಿಗೆ ಹೊರಟನು.

ಇಲ್ಲಿಗೆ ಶ್ರೀಬ್ರಹ್ಮಪುರಾಣದಲ್ಲಿ ಕೃಷ್ಣಚರಿತ್ರೆಯಲ್ಲಿ ನರಕಾಸುರವಧವೆಂಬ
ಇನ್ನೂರೆರಡನೆಯ ಅಧ್ಯಾಯವು ಮುಗಿದುದು.

---

ಶ್ರೀಃ

ಓಂ ತತ್ಸದ್ಬ್ರಹ್ಮಣೇನಮಃ

# ಅಥ ಬ್ರಾಹ್ಮೇ ಮಹಾಪುರಾಣೇ

## ತ್ರ್ಯಧಿಕದ್ವಿಶತತಮೋಽಧ್ಯಾಯಃ

॥ ವ್ಯಾಸ ಉವಾಚ ॥

ಗರುಡೋ ವಾರುಣಂ ಛತ್ರಂ ತಥೈವ ಮಣಿಪರ್ವತಂ ।
ಸಭಾರ್ಯಂ ಚ ಹೃಷೀಕೇಶಂ ಲೀಲಯೈವ ವಹನ್ಯಯೌ ॥ ೧ ॥

ತತಃ ಶಂಖಮುಪಾಧ್ಮಾಯ ಸ್ವರ್ಗದ್ವಾರಂ ಗತೋ ಹರಿಃ ।
ಉಪತಸ್ಥುಸ್ತತೋ ದೇವಾಃ ಸಾರ್ಘಪಾತ್ರಾ ಜನಾರ್ದನಂ ॥ ೨ ॥

ಸ ದೇವೈರರ್ಚಿತಃ ಕೃಷ್ಣೋ ದೇವಮಾತುರ್ನಿವೇಶನಂ ।
ಸಿತಾಭ್ರಶಿಖರಾಕಾರಂ ಪ್ರವಿಶ್ಯ ದದೃಶೇಽದಿತಿಂ ॥ ೩ ॥

---

### ಇನ್ನೂರಮೂರನೆಯ ಅಧ್ಯಾಯವು

೧. ಎಲೈ ಋಷಿಗಳಿರಾ! ಆ ಗರುಡನು ವರುಣನ ಶ್ವೇತಚ್ಛತ್ರವನ್ನೂ, ಮಂದರದ ಮಣಿಪರ್ವತವನ್ನೂ, ಸತ್ಯಭಾಮಾ ಸಮೇತನಾದ ಶ್ರೀಕೃಷ್ಣನನ್ನೂ ಹೊತ್ತುಕೊಂಡು ಲೀಲಾಜಾಲವಾಗಿ ಹಾರಿದನು.

೨. ಸ್ವರ್ಗಲೋಕದ ಬಳಿಗೆ ಬರುತ್ತಲೇ ಶ್ರೀಕೃಷ್ಣನು ತನ್ನ ಪಾಂಚಜನ್ಯವನ್ನು ಊದಿದನು. ಆ ಶಬ್ದವನ್ನು ಕೇಳುತ್ತಲೇ ದೇವತೆಗಳೆಲ್ಲರೂ ಶ್ರೀಕೃಷ್ಣನನ್ನು ಸ್ವಾಗತಿಸಲು ಪೂಜಾಪಾತ್ರಗಳೊಡನೆ ಅಲ್ಲಿಗೆ ಬಂದರು.

೩. ಬಳಿಕ ಶ್ರೀಕೃಷ್ಣನು ದೇವತೆಗಳೆಲ್ಲರೂ ಮಾಡಿದ ಸತ್ಕಾರವನ್ನು ಸ್ವೀಕರಿಸಿ ಅವರುಗಳಿಗೆಲ್ಲ ಜನನಿಯಾದ ಅದಿತಿಯ ನಿವಾಸವಾದ, ಶುಭ್ರವಾದ ಮೇಘದಂತೆ ಮೆರೆಯುತ್ತಿದ್ದ ಮನೆಯನ್ನು ಹೊಕ್ಕು ಆಕೆಯನ್ನು ಕಂಡನು.

ಸ ತಾಂ ಪ್ರಣಮ್ಯ ಶಕ್ರೇಣ ಸಹಿತಃ ಕುಂಡಲೋತ್ತಮೇ ।
ದದೌ ನರಕನಾಶಂ ಚ ಶಶಂಸಾಸ್ಯೈ ಜನಾರ್ದನಃ ॥ ೪ ॥

ತತಃ ಪ್ರೀತಾ ಜಗನ್ಮಾತಾ ಧಾತಾರಂ ಜಗತಾಂ ಹರಿಂ ।
ತುಷ್ಟಾವಾದಿತಿರವ್ಯಗ್ರಂ ಕೃತ್ವಾ ತತ್ಪ್ರವಣಂ ಮನಃ ॥ ೫ ॥

॥ ಅದಿತಿರುವಾಚ ॥

ನಮಸ್ತೇ ಪುಂಡರೀಕಾಕ್ಷ ಭಕ್ತಾನಾಮಭಯಂಕರ ।
ಸನಾತನಾತ್ಮನ್ಭೂತಾತ್ಮನ್ಸರ್ವಾತ್ಮನ್ಭೂತಭಾವನ ॥ ೬ ॥

ಪ್ರಣೇತರ್ಮನಸೋ ಬುದ್ಧೇರಿಂದ್ರಿಯಾಣಾಂ ಗುಣಾತ್ಮಕ ।
ಸಿತದೀರ್ಘಾದಿನಿಃಶೇಷಕಲ್ಪನಾಪರಿವರ್ಜಿತ ॥ ೭ ॥

ಜನ್ಮಾದಿಭಿರಸಂಸ್ಪೃಷ್ಟಸ್ವಪ್ನಾದಿವಾರಿವರ್ಜಿತಃ ।
ಸಂಧ್ಯಾ ರಾತ್ರಿರಹರ್ಭೂಮಿರ್ಗಗನಂ ವಾಯುರಂಬು ಚ ॥ ೮ ॥

---

೪. ಅನಂತರ ಶ್ರೀಕೃಷ್ಣನು ಇಂದ್ರನೊಡನೆ ಆ ದೇವಮಾತೆಯಾದ ಅದಿತಿಗೆ ನಮಸ್ಕರಿಸಿ ಆಕೆಯ ಉತ್ಕೃಷ್ಟವಾದ ಕುಂಡಲಗಳನ್ನು ಒಪ್ಪಿಸಿ ನರಕಾಸುರನು ಸಂಹರಿಸಲ್ಪಟ್ಟ ಸಂಗತಿಯನ್ನು ತಿಳಿಸಿದನು.

೫. ಆಗ ಸಂತುಷ್ಟಳಾಗಿ ಜಗತ್ತಿಗೇ ಮಾತೆಯೆನಿಸಿದ ಅದಿತಿಯು ಲೋಕಗಳಿಗೆಲ್ಲಕ್ಕೂ ಸೃಷ್ಟಿಕರ್ತನಾದ ಶ್ರೀಕೃಷ್ಣನಲ್ಲಿಯೇ ತನ್ನ ಮನಸ್ಸನ್ನು ನೆಲೆಗೊಳಿಸಿ ಆತನನ್ನು ಈರೀತಿ ಸ್ತೋತ್ರಮಾಡಿದಳು.

೬. ಎಲೈ ಪುಂಡರೀಕಾಕ್ಷನೇ, ಭಕ್ತರಿಗೆ ಅಭಯವನ್ನು ಕೊಡುವವನೂ, ಸನಾತನನೂ, ಸಕಲ ಜೀವಸ್ವರೂಪನೂ, ಎಲ್ಲರಲ್ಲಿಯೂ ನೆಲೆಸಿರುವವನೂ, ಭೂತಭಾವನನೂ ಆದ ನಿನಗೆ ನಮಸ್ಕಾರವು.

೭. ಎಲೈ ಗುಣಸ್ವರೂಪನೇ, ನೀನು ಮನಸ್ಸಿಗೂ, ಬುದ್ಧಿಗೂ, ಇಂದ್ರಿಯಗಳಿಗೂ ಪ್ರೇರಕನಾದವನು. ಮತ್ತು ನೀನು, ಬಿಳುಪು, ಕಪ್ಪು, ಎತ್ತರ, ತಗ್ಗು ಮೊದಲಾದ ಯಾವೊಂದು ಕಲ್ಪನೆಗೂ ವಿಷಯನಾಗದಿರುವೆ.

೮-೯. ನಿನಗೆ ಜನ್ಮ, ಜರಾ, ಮೃತ್ಯುಗಳು ಇರುವುದಿಲ್ಲ. ಅದೇರೀತಿ ಜಾಗ್ರತ್, ಸ್ವಪ್ನ, ಸುಷುಪ್ತಿಗಳೆಂಬ ಅವಸ್ಥಾತ್ರಯಗಳಿಗೂ ನಿನ್ನನ್ನು ಸೋಕ

ಹುತಾಶನೋ ಮನೋ ಬುದ್ಧಿರ್ಭೂತಾದಿಸ್ತ್ವಂ ತಥಾಚ್ಯುತ ।
ಸೃಷ್ಟಿಸ್ಥಿತಿವಿನಾಶಾನಾಂ ಕರ್ತಾ ಕರ್ತೃಪತಿರ್ಭವಾನ್ ॥ ೯ ॥

ಬ್ರಹ್ಮವಿಷ್ಣುಶಿವಾಖ್ಯಾಭಿರಾತ್ಮಮೂರ್ತಿಭಿರೀಶ್ವರಃ ।
ಮಾಯಾಭಿರೇತದ್ವ್ಯಾಪ್ತಂ ತೇ ಜಗತ್ಸ್ಥಾವರಜಂಗಮಂ ॥ ೧೦ ॥

ಅನಾತ್ಮನ್ಯಾತ್ಮವಿಜ್ಞಾನಂ ಸಾ ತೇ ಮಾಯಾ ಜನಾರ್ದನ ।
ಅಹಂ ಮಮೇತಿ ಭಾವೋಽತ್ರ ಯಯಾ ಸಮುಪಜಾಯತೇ ॥ ೧೧ ॥

ಸಂಸಾರಮಧ್ಯೇ ಮಾಯಾಯಾಸ್ತವೈತನ್ನಾಥ ಚೇಷ್ಟಿತಂ ।
ಯೈಃ ಸ್ವಧರ್ಮಪರೈರ್ನಾಥ ನರೈರಾರಾಧಿತೋ ಭವಾನ್ ॥ ೧೨ ॥

ತೇ ತರಂತ್ಯಖಿಲಾಮೇತಾಂ ಮಾಯಾಮಾತ್ಮವಿಮುಕ್ತಯೇ ।
ಬ್ರಹ್ಮಾದ್ಯಾಃ ಸಕಲಾ ದೇವಾ ಮನುಷ್ಯಾಃ ಪಶವಸ್ತಥಾ ॥ ೧೩ ॥

---

ಲಾರವು. ಪ್ರಾತಸ್ಸಾಯಂ ಸಂಧ್ಯೆಗಳೂ, ಹಗಲು ರಾತ್ರಿಗಳೂ, ಭೂಮ್ಯಂತರಿಕ್ಷಗಳೂ, ಗಾಳಿ ಮತ್ತು ನೀರೂ, ಅಗ್ನಿಯೂ, ಮನಸ್ಸೂ, ಬುದ್ಧಿಯೂ ನೀನಲ್ಲದೆ ಬೇರೆಯಲ್ಲ. ಎಲೈ ಅಚ್ಯುತನೇ, ನೀನೇ ಸಕಲ ಭೂತಗಳಿಗೂ ಆದಿಯಾಗಿರುವೆ. ಮತ್ತು ಸೃಷ್ಟಿ, ಸ್ಥಿತಿ, ಸಂಹಾರ ಕಾರ್ಯಗಳನ್ನು ಮಾಡುವವನೂ, ಕರ್ತೃಗಳಿಗೆಲ್ಲಾ ಒಡೆಯನೂ ನೀನೇ ಆಗಿರುವೆ.

೧೦. ಎಲೈ ಈಶ್ವರನೇ, ಬ್ರಹ್ಮ, ವಿಷ್ಣು, ಶಿವರೆಂಬ ಈ ತ್ರಿವಿಧ ಮೂರ್ತಿಗಳು ನಿನ್ನ ಮಾಯೆಯಲ್ಲದೆ ಬೇರಯಲ್ಲ. ಇವುಗಳಿಂದಲೇ ಚರಾಚರಾತ್ಮಕವಾದ ಈ ಜಗತ್ತೆಲ್ಲವೂ ಸ್ಥಾಪಿಸಲ್ಪಟ್ಟಿರುವುದು.

೧೧. ಓ ಜನಾರ್ದನ! ಯಾವುದು ಆತ್ಮವಲ್ಲವೋ. ಅಂಥದನ್ನು ಆತ್ಮನೆಂದು ಭ್ರಮಿಸುವುದೇ ಮಾಯೆಯೆನಿಸುವುದು. ಆ ಮಾಯೆಯಿಂದಲೇ, ನಾನು, ನನ್ನದು ಎಂಬೀರೀತಿಯ ವಾಸನೆಯು ಜೀವಿಗೆ ಉಂಟಾಗುವುದು.

೧೨-೧೩. ಎಲೈ ನಾಥನೇ, ಸಂಸಾರಕ್ಕೆ ಸಿಕ್ಕಿ ತೊಳಲುತ್ತಿರುವುದೆಲ್ಲಾ ನಿನ್ನ ಮಾಯೆಯ ಲೀಲೆಯೇ ವಿನಾ ಮತ್ತೆ ಬೇರೆಯಲ್ಲ. ಯಾವ ಮನುಜರು,

ವಿಷ್ಣುಮಾಯಾಮಹಾವರ್ತೇ ಮೋಹಾಂಧತಮಸಾವೃತಾಃ ।
ಆರಾಧ್ಯ ತ್ವಾಮಭೀಪ್ಸಂತೇ ಕಾಮಾನಾತ್ಮಭವಕ್ಷಯೇ ॥ ೧೪ ॥

ಪದೇ ತೇ ಪುರುಷಾ ಬದ್ಧಾ ಮಾಯಯಾ ಭಗವಂಸ್ತವ ।
ಮಯಾ ತ್ವಂ ಪುತ್ರಕಾಮಿನ್ಯಾ ವೈರಿಪಕ್ಷಕ್ಷಯಾಯ ಚ ॥ ೧೫ ॥

ಆರಾಧಿತೋ ನ ಮೋಕ್ಷಾಯ ಮಾಯಾವಿಲಸಿತಂ ಹಿ ತತ್ ।
ಕೌಪೀನಾಚ್ಛಾದನಪ್ರಾಯಾ ವಾಂಛಾ ಕಲ್ಪದ್ರುಮಾದಪಿ ॥ ೧೬ ॥

ಜಾಯತೇ ಯದಪುಣ್ಯಾನಾಂ ಸೋಽಪರಾಧಃ ಸ್ವದೋಷಜಃ ।
ತತ್ಪ್ರಸೀದಾಖಿಲಜಗನ್ಮಾಯಾಮೋಹಕರಾವ್ಯಯ ॥ ೧೭ ॥

---

ತಂತಮ್ಮ ಧರ್ಮಗಳಲ್ಲಿ ನಿರತರಾಗಿ ನಿನ್ನನ್ನು ಆರಾಧಿಸುವರೋ ಅಂಥವರು ಮಾತ್ರ ನಿನ್ನೀ ಮಾಯೆಯೆಲ್ಲವನ್ನೂ ದಾಟಿ ಮೋಕ್ಷವನ್ನು ಪಡೆಯುವರು. ಬ್ರಹ್ಮನೇ ಆದಿಯಾಗಿ ಸಕಲ ದೇವತೆಗಳೂ, ಮನುಷ್ಯರೂ, ಪಶುಗಳೂ, ಮೋಹವೆಂಬ ಕಗ್ಗತ್ತಲೆಗೆ ಸಿಕ್ಕಿ ಕಣ್ಣು ಕಾಣದೆ ವಿಷ್ಣುಮಾಯೆಯೆಂಬ ಭಾರಿ ಸುಳಿಯಲ್ಲಿ ಸಿಕ್ಕಿ ತೊಳಲುತ್ತಿರುವರು. ಅವರೆಲ್ಲರೂ ನಿನ್ನ ಆರಾಧನವೊಂದರಿಂದಲೇ ತಂತಮ್ಮ ಜನ್ಮಗಳ ಸಮಾಪ್ತಿಯಾದಮೇಲೆ ತಮ್ಮ ಇಷ್ಟಾರ್ಥಗಳನ್ನು ಪಡೆಯುವರು.

೧೫-೧೭. ಎಲೈ ಭಗವಂತನೇ, ನಿನ್ನ ಮಾಯೆಯು ಪಾಶದಂತೆ ಎಲ್ಲ ಜೀವಿಗಳ ಕಾಲುಗಳನ್ನೂ ಕಟ್ಟಿಹಾಕಿಬಿಟ್ಟಿರುವುದು. ನಾನು ಕೂಡ ಹಿಂದೆ, ನನಗೆ ಮಗನಾಗಬೇಕೆಂದೂ, ಶತೃಗಳೆಲ್ಲರೂ ಹತರಾಗಬೇಕೆಂದೂ ನಿನ್ನನ್ನು ಆರಾಧಿಸಿದೆನೇ ವಿನಾ ಮತ್ತೆಬೇರೆ ಮೋಕ್ಷವನ್ನು ಪಡೆಯಬೇಕೆಂದಲ್ಲ. ಇದೆಲ್ಲವೂ ನಿನ್ನ ಆ ಮಾಯೆಯ ವಿಲಾಸವೇ ಅಲ್ಲವೇ? ಪುಣ್ಯಹೀನರಾದವರು, ಕಲ್ಪದ್ರುಮವೇ ಎದುರಿಗಿದ್ದರೂ ಕೌಪೀನದಷ್ಟು ಮಾತ್ರ ಆಚ್ಛಾದನವನ್ನು ಬೇಡಿದರೆ, ಅದು ಅವರು ತಾವಾಗಿಯೇ ತಾವು ಮಾಡಿಕೊಂಡ ಅಪರಾಧವೆನಿಸುವುದು. ಆದುದರಿಂದ, ಎಲೈ ನಾಶರಹಿತನೇ, ಸಕಲ ಜಗತ್ತನ್ನೂ ಮಾಯಾಜಾಲಕ್ಕೆ ಸಿಲುಕಿಸಿ ಮಂಕು ಕವಿಯುವಂತೆ ಮಾಡಬಲ್ಲ ಓ ಪ್ರಭುವೇ! ಪ್ರಸನ್ನನಾಗು.

**ಅಜ್ಞಾನಂ ಜ್ಞಾನಸದ್ಭಾವ ಭೂತಭೂತೇಶ ನಾಶಯ ।**
**ನಮಸ್ತೇ ಚಕ್ರಹಸ್ತಾಯ ಶಾರ್ಙ್ಗಹಸ್ತಾಯ ತೇ ನಮಃ ॥ ೧೮ ॥**

**ಗದಾಹಸ್ತಾಯ ತೇ ವಿಷ್ಣೋ ಶಂಖಹಸ್ತಾಯ ತೇ ನಮಃ ।**
**ಏತತ್ಪಶ್ಯಾಮಿ ತೇ ರೂಪಂ ಸ್ಥೂಲಚಿಹ್ನೋಪಶೋಭಿತಂ ।**
**ನ ಜಾನಾಮಿ ಪರಂ ಯತ್ತೇ ಪ್ರಸೀದ ಪರಮೇಶ್ವರ ॥ ೧೯ ॥**

**॥ ವ್ಯಾಸ ಉವಾಚ ॥**

**ಅದಿತ್ಯೈವಂ ಸ್ತುತೋ ವಿಷ್ಣುಃ ಪ್ರಹಸ್ಯಾಹ ಸುರಾರಣಿಂ ॥ ೨೦ ॥**

**॥ ಶ್ರೀಕೃಷ್ಣ ಉವಾಚ ॥**

**ಮಾತಾ ದೇವಿ ತ್ವಮಸ್ಮಾಕಂ ಪ್ರಸೀದ ವರದಾ ಭವ ॥ ೨೧ ॥**

**॥ ಅದಿತಿರುವಾಚ ॥**

**ಏವಮಸ್ತು ಯಥೇಚ್ಛಾ ತೇ ತ್ವಮಶೇಷಸುರಾಸುರೈಃ ।**
**ಅಜೇಯಃ ಪುರುಷವ್ಯಾಘ್ರ ಮರ್ತ್ಯಲೋಕೇ ಭವಿಷ್ಯಸಿ ॥ ೨೨ ॥**

---

೧೮. ಎಲೈ ಜ್ಞಾನಸ್ವರೂಪನೇ, ನನ್ನೀ ಅಜ್ಞಾನವನ್ನು ಪರಿಹರಿಸು. ಎಲೈ ಸಕಲ ಪ್ರಾಣಿಗಳಿಗೂ ಅಧಿಪತಿಯಾದವನೇ, ಚಕ್ರಧಾರಿಯೂ ಶಾರ್ಙ್ಗ ಧನುರ್ಧರನೂ ಆದ ನಿನಗೆ ನಮಸ್ಕರಿಸುವೆನು.

೧೯. ಎಲೈ ವಿಷ್ಣುವೇ (ಸರ್ವವ್ಯಾಪಿಯೇ) ಗದಾಹಸ್ತನಾದ ನಿನಗೆ ನಮಸ್ಕಾರವು. ಓ ಪರಮೇಶ್ವರಾ! ಸ್ಥೂಲವಾದ ಚಿಹ್ನೆಗಳಿಂದ ತೋರುತ್ತಿರುವ ನಿನ್ನೀರೂಪವನ್ನೊಂದಲ್ಲದೆ ಪರಾತ್ಪರವಾದ ನಿನ್ನ ದಿವ್ಯಸ್ವರೂಪವನ್ನು ಕಾಣ ಲಾಗದ ನನ್ನ ಅಪರಾಧವನ್ನು ಮನ್ನಿಸು.

೨೦-೨೧. ಈರೀತಿಯಾಗಿ ಅದಿತಿದೇವಿಯಿಂದ ಸ್ತುತಿಸಲ್ಪಟ್ಟ ಶ್ರೀ ಕೃಷ್ಣನು ನಸುನಗುತ್ತಾ ದೇವತೆಗಳಿಗೆಲ್ಲಾ ಆರಣಿ ಸ್ವರೂಪಳಾದ (ಮಾತೆ) ಆಕೆ ಯನ್ನು ಕುರಿತು. “ಎಲೌ ದೇವಿ, ನೀನು ನಮ್ಮೆಲ್ಲರಿಗೂ ತಾಯಿಯಾಗಿರುವೆ. ನೀನೇ ನಮ್ಮಲ್ಲಿ ಪ್ರಸನ್ನಳಾಗಿ ವರವನ್ನು ನೀಡು” ಎಂದು ಪ್ರಾರ್ಥಿಸಿದನು.

೨೨. ಆಗ ಅದಿತಿಯು ಶ್ರೀಕೃಷ್ಣನನ್ನು ಕುರಿತು “ಓ ಪುರುಷಶ್ರೇಷ್ಠ! ನೀನು ಅಪೇಕ್ಷಿಸಿದಂತೆಯೇ ಆಗಲಿ. ಮರ್ತ್ಯಲೋಕದಲ್ಲಿ ನಿನ್ನನ್ನು ದೇವತೆ ಗಳಾಗಲಿ ಅಸುರರಾಗಲಿ ಯಾರೂ ಗೆಲ್ಲದಿರುವಂತೆ ಆಗಲಿ” ಎಂದು ಹರಿಸಿದಳು.

॥ ವ್ಯಾಸ ಉವಾಚ ॥

ತತೋಽನಂತರಮೇವಾಸ್ಯ ಶಕ್ರಾಣೀಸಹಿತಾಂ ದಿತಿಂ ।
ಸತ್ಯಭಾಮಾ ಪ್ರಣಮ್ಯಾಹ ಪ್ರಸೀದೇತಿ ಪುನಃ ಪುನಃ ॥ ೨೩ ॥

॥ ಅದಿತಿರುವಾಚ ॥

ಮತ್ಪ್ರಸಾದಾನ್ನ ತೇ ಸುಭ್ರು ಜರಾ ವೈರೂಪ್ಯಮೇವ ಚ ।
ಭವಿಷ್ಯತ್ಯನವದ್ಯಾಂಗಿ ಸರ್ವಕಾಮಾ ಭವಿಷ್ಯಸಿ ॥ ೨೪ ॥

॥ ವ್ಯಾಸ ಉವಾಚ ॥

ಅದಿತ್ಯಾ ತು ಕೃತಾನುಜ್ಞೋ ದೇವರಾಜೋ ಜನಾರ್ದನಂ ।
ಯಥಾವತ್ಪೂಜಯಾಮಾಸ ಬಹುಮಾನಪುರಃಸರಂ ॥ ೨೫ ॥

ತತೋ ದದರ್ಶ ಕೃಷ್ಣೋಽಪಿ ಸತ್ಯಭಾಮಾಸಹಾಯವಾನ್ ।
ದೇವೋದ್ಯಾನಾನಿ ಸರ್ವಾಣಿ ನಂದನಾದೀನಿ ಸತ್ತಮಾಃ ॥ ೨೬ ॥

---

೨೩. ಬಳಿಕ ಕೃಷ್ಣನ ಮಡದಿಯಾದ ಸತ್ಯಭಾಮೆಯು, ಶಚೀದೇವಿ ಯೊಡನೆ ಆ ಅದಿತಿಗೆ ನಮಸ್ಕರಿಸಿ ಪ್ರಸನ್ನಳಾಗು (ಅನುಗ್ರಹಿಸು) ಎಂಬುದಾಗಿ ಪುನಃ ಪುನಃ ಪ್ರಾರ್ಥಿಸಿದಳು.

೨೪. ಆಗ ಅದಿತಿಯು, ಅವಳನ್ನು ಕುರಿತು "ಎಲೌ ಸುಭ್ರು! (ಅಂದವಾದ ಹುಬ್ಬುಗಳುಳ್ಳವಳು) ನಿನ್ನ ಇಷ್ಟಾರ್ಥಗಳೆಲ್ಲವೂ (ಅಂದಗೆಡುವಿಕೆ) ಉಂಟಾಗದಿರಲಿ. ಎಲೌ ಅನವದ್ಯಾಂಗಿ (ನಿಷ್ಕಲಂಕವಾದ ಅವಯವಗಳುಳ್ಳವಳು) ನಿನ್ನ ಇಷ್ಟಾರ್ಥಗಳೆಲ್ಲವೂ ಕೈಗೂಡಲಿ" ಎಂದು ಹಾರೈಸಿದಳು.

೨೫. ಬಳಿಕ ದೇವರಾಜನಾದ ಇಂದ್ರನು ಅದಿತಿಯ ಒಪ್ಪಿಗೆಯನ್ನು ಪಡೆದು ಜನಾರ್ದನನನ್ನು ಅತಿಶಯವಾದ ಮರ್ಯಾದೆಯಿಂದ ವಿಧಿವತ್ತಾಗಿ ಪೂಜಿಸಿದನು.

೨೬. ಅನಂತರ ಶ್ರೀಕೃಷ್ಣನು ಸತ್ಯಭಾಮೆಯೊಡನೆ ನಂದನವನ ಮೊದ ಲಾದ ದೇವತೆಗಳ ವಿಹಾರಭೂಮಿಗಳಾದ ಉದ್ಯಾನಗಳನ್ನು ನೋಡುತ್ತಾ ಬಂದನು.

ದದರ್ಶ ಚ ಸುಗಂಧಾಢ್ಯಂ ಮಂಜರೀಪುಂಜಧಾರಿಣಂ ।
ಶೈತ್ಯಾಹ್ಲಾದಕರಂ ದಿವ್ಯಂ ತಾಮ್ರಪಲ್ಲವಶೋಭಿತಂ ॥ ೨೭ ॥

ಮಥ್ಯಮಾನೇಽಮೃತೇ ಜಾತಂ ಜಾತರೂಪಸಮಪ್ರಭಂ ।
ಪಾರಿಜಾತಂ ಜಗನ್ನಾಥಃ ಕೇಶವಃ ಕೇಶಿಸೂದನಃ ।
ತಂ ದೃಷ್ಟ್ವಾ ಪ್ರಾಹ ಗೋವಿಂದಂ ಸತ್ಯಭಾಮಾ ದ್ವಿಜೋತ್ತಮಾಃ ॥ ೨೮ ॥

॥ ಸತ್ಯಭಾಮೋವಾಚ ॥

ಕಸ್ಮಾನ್ನ ದ್ವಾರಕಾಮೇಷ ನೀಯತೇ ಕೃಷ್ಣ ಪಾದಪಃ ।
ಯದಿ ತೇ ತದ್ವಚಃ ಸತ್ಯಂ ಸತ್ಯಾತ್ಯರ್ಥಂ ಪ್ರಿಯೇತಿ ಮೇ ॥ ೨೯ ॥

ಮದ್ಗೃಹೇ ನಿಷ್ಕುಟಾರ್ಥಾಯ ತದಯಂ ನೀಯತಾಂ ತರುಃ ।
ನ ಮೇ ಜಾಂಬವತೀ ತಾದೃಗಭೀಷ್ಟಾ ನ ಚ ರುಕ್ಮಿಣೀ ॥ ೩೦ ॥

---

೨೭-೨೮. ಆಗ ಅಲ್ಲಿ, ಹಿಂದೆ ಅಮೃತದ ಸಲುವಾಗಿ ಕ್ಷೀರಸಮುದ್ರವನ್ನು ಕಡೆಯುವಾಗ ಹುಟ್ಟಿದ, ಚಿನ್ನದಂತೆ ಥಳಥಳಿಸುತ್ತಾ ಸೊಗಸಿನಿಂದ ಮೆರೆಯುತ್ತಿರುವ ಪಾರಿಜಾತ ವೃಕ್ಷವನ್ನು ಜಗತ್ಪ್ರಭುವೂ ಕೇಶಿಸಂಹಾರಿಯೂ ಆದ ಕೇಶವನು ಕಂಡನು. ಆ ಪಾರಿಜಾತವು ಸುವಾಸನೆಯನ್ನು ಬೀರುತ್ತಾ, ಸಾಲುಸಾಲಾಗಿ ಗೊಂಚಲುಗಳಿಂದ ತನ್ನ, ಬಳಿಗೆ ಬರುವವರಿಗೆ ತಂಪನ್ನೂ ಸಂತೋಷವನ್ನೂ ಉಂಟುಮಾಡುತ್ತಲೂ, ಕೆಂಪು ಬಣ್ಣದಿಂದ ಕೂಡಿ ಮನೋಹರವಾಗಿರುವ ಎಳೆದಾದ ಚಿಗುರುಗಳಿಂದ ರಮ್ಯವಾಗಿ ಕಂಗೊಳಿಸುತ್ತಿತ್ತು. ಎಲೈ ದ್ವಿಜಶ್ರೇಷ್ಠರಿರಾ! ಅದನ್ನು ಕಂಡು ಸತ್ಯಭಾಮೆಯು ಶ್ರೀಕೃಷ್ಣನನ್ನು ಕುರಿತು ಇಂತೆಂದಳು.

೨೯. ಕೃಷ್ಣ! ಈ ಪಾರಿಜಾತವನ್ನೇಕೆ ದ್ವಾರಕೆಗೆ ನಾವು ತೆಗೆದುಕೊಂಡು ಹೋಗಬಾರದು? ನೀನು ಹೇಳುತ್ತಿರಲಿಲ್ಲವೇ, "ಸತ್ಯಭಾಮೆಯೇ ನನಗೆ ಅಚ್ಚುಮೆಚ್ಚಿನ ಮಡದಿ" ಎಂದು. ಆ ಮಾತು ನಿಜವೇ ಆದರೆ ನನ್ನ ಮನೆಯ ಉದ್ಯಾನಕ್ಕೋಸ್ಕರ ಈ ವೃಕ್ಷವನ್ನು ನೀನು ತರಲೇಬೇಕು.

೩೦-೩೧. ಓ ಕೃಷ್ಣ! ನೀನು ಆಗಾಗ್ಯೆ ನನ್ನನ್ನು ಕುರಿತು ಹೇಳುತ್ತಿದ್ದೆಯಲ್ಲವೇ? ನಿನ್ನಹಾಗೆ ಜಾಂಬುವತಿಯೂ ನನಗೆ ಪ್ರಿಯಳೆನಿಸಳು, ರುಕ್ಮಿ

ಸತ್ಯೇ ಯಥಾ ತ್ವಮಿತ್ಯುಕ್ತಂ ತ್ವಯಾ ಕೃಷ್ಣಾಸಕೃತ್ಪ್ರಿಯಂ ।
ಸತ್ಯಂ ತದ್ಯದಿ ಗೋವಿಂದ ನೋಪಚಾರಕೃತಂ ವಚಃ ॥ ೩೧ ॥

ತದಸ್ತು ಪಾರಿಜಾತೋಽಯಂ ಮಮ ಗೇಹವಿಭೂಷಣಂ ।
ಬಿಭ್ರತೀ ಪಾರಿಜಾತಸ್ಯ ಕೇಶಪಾಶೇನ ಮಂಜರೀಂ ।
ಸಪತ್ನೀನಾಮಹಂ ಮಧ್ಯೇ ಶೋಭೇಯಮಿತಿ ಕಾಮಯೇ ॥ ೩೨ ॥

॥ ವ್ಯಾಸ ಉವಾಚ ॥

ಇತ್ಯುಕ್ತಃ ಸ ಪ್ರಹಸ್ಯೈನಂ ಪಾರಿಜಾತಂ ಗರುತ್ಮತಿ ।
ಆರೋಪಯಾಮಾಸ ಹರಿಸ್ತಮೂಚುರ್ವನರಕ್ಷಿಣಃ ॥ ೩೩ ॥

॥ ವನಪಾಲಾ ಊಚುಃ ॥

ಭೋಃ ಶಚೀ ದೇವರಾಜಸ್ಯ ಮಹಿಷೀ ತತ್ಪರಿಗ್ರಹಂ ।
ಪಾರಿಜಾತಂ ನ ಗೋವಿಂದ ಹರ್ತುಮರ್ಹಸಿ ಪಾದಪಂ ॥ ೩೪ ॥

---

ಣಿಯೂ ಸಹ ನಿನ್ನಂತೆ ನನಗೆ ಪ್ರಿಯಳಲ್ಲವು ಎಂದು. ಈಮಾತು ಬರೀ ಉಪಚಾರದ ಮಾತಾಗದೆ, ಖಂಡಿತವಾಗಿಯೂ ನಿಜವಾಗಿದ್ದಲ್ಲಿ ಈ ಪಾರಿಜಾತವೃಕ್ಷವು ನನ್ನ ಮನೆಗೆ ಅಲಂಕಾರವಾಗಿ ಅದರ ಅಂದವನ್ನು ಹೆಚ್ಚಿಸಲಿ.

೩೨. ಈ ಪಾರಿಜಾತದ ಮಂಜರಿಯನ್ನು (ಹೂಗೊಂಚಲು) ಜಡೆಯ ನಡುವೆ ಮುಡಿದು ನನ್ನ ಸವತಿಯರ ನಡುವೆ ಚೆನ್ನಾಗಿ ಮೆರೆಯಬೇಕೆಂದು ನನಗೆ ಆಸೆಯಾಗುವುದು.

೩೩. ಎಂಬುದಾಗಿ ಸತ್ಯಭಾಮೆಯು ತನ್ನನ್ನು ಕೇಳಿಕೊಳ್ಳಲು ಶ್ರೀಕೃಷ್ಣನು ನಸುನಗುತ್ತಾ ಪಾರಿಜಾತವೃಕ್ಷವನ್ನು ಗರುಡನ ಹೆಗಲಮೇಲೆ ಹೊರಿಸಿದನು. ಆವನದ ಕಾವಲುಗಾರರು ಶ್ರೀಕೃಷ್ಣನನ್ನು ಕುರಿತು ಇಂತೆಂದರು.

೩೪. ಎಲೈ ಗೋವಿಂದ, ದೇವರಾಜನಾದ ಇಂದ್ರನ ಪಟ್ಟದರಾಣಿಯಾದ ಶಚಿಗೆ ಒಪುವಾಗಿ ಬೇಕಾದ ಈ ಪಾರಿಜಾತವನ್ನು ನೀನು ತೆಗೆದುಕೊಂಡು ಹೋಗಕೂಡದು.

ಶಚೀವಿಭೂಷಣಾರ್ಥಾಯ ದೇವೈರಮೃತಮಂಥನೇ ।
ಉತ್ಪಾದಿತೋಽಯಂ ನ ಕ್ಷೇಮೀ ಗೃಹೀತ್ವೈನಂ ಗಮಿಷ್ಯಸಿ ॥ ೩೫ ॥

ಮೌಢ್ಯಾತ್ಪ್ರಾರ್ಥಯಸೇ ಕ್ಷೇಮೀ ಗೃಹೀತ್ವೈನಂ ಚ ಕೋ ವ್ರಜೇತ್ ।
ಅವಶ್ಯಮಸ್ಯ ದೇವೇಂದ್ರೋ ನಿಷ್ಕೃತಿಂ ಕೃಷ್ಣ ಯಾಸ್ಯತಿ ॥ ೩೬ ॥

ವಜ್ರೋದ್ಯತಕರಂ ಶಕ್ರಮನುಯಾಸ್ಯಂತಿ ಚಾಮರಾಃ ।
ತದಲಂ ಸಕಲೈರ್ದೇವೈರ್ವಿಗ್ರಹೇಣ ತವಾಚ್ಯುತ ।
ವಿಪಾಕಕಟು ಯತ್ಕರ್ಮ ನ ತಚ್ಛಂಸಂತಿ ಪಂಡಿತಾಃ ॥ ೩೭ ॥

॥ ವ್ಯಾಸ ಉವಾಚ ॥

ಇತ್ಯುಕ್ತೇ ತೈರುವಾಚೈತಾನ್ಸತ್ಯಭಾಮಾತಿಕೋಪಿನೀ ॥ ೩೮ ॥

---

೩೫. ಆ ಶಚಿಗೆ ಅಲಂಕಾರಗಳನ್ನೊದಗಿಸುವುದಕ್ಕೋಸ್ಕರವಾಗಿಯೇ ಹಿಂದೆ ಅಮೃತಮಥನಸಮಯದಲ್ಲಿ ದೇವತೆಗಳು ಇದನ್ನು ಸೃಷ್ಟಿಸಿದರು. ಇದನ್ನು ತೆಗೆದುಕೊಂಡರೆ ಕ್ಷೇಮವಾಗಿ ಇಲ್ಲಿಂದು ಹೊರಡಲಾರೆ.

೩೬. ಕೃಷ್ಣ! ನೀನು ಈ ಪಾರಿಜಾತವನ್ನು ಬಯಸುತ್ತಿರುವುದು ಮೂಢತೆಯಿಂದಲ್ಲದೆ ಮತ್ತೆ ಬೇರೆಯಲ್ಲ. ಇದನ್ನು ತೆಗೆಮುಕೊಂಡು ಯಾವನು ತಾನೇ ಕ್ಷೇಮವಾಗಿ ಹೋಗಬಲ್ಲನು? ಈ ಅಪರಾಧಕ್ಕೆ ದೇವೇಂದ್ರನು ಖಂಡಿತ ವಾಗಿಯೂ ಕೋಪಗೊಳ್ಳುವನು.

೩೭. ಇಂದ್ರನು ಕೋಪದಿಂದ ವಜ್ರಾಯುಧವನ್ನು ಹಿಡಿದು ಹೊರ ಟರೆ ದೇವತೆಗಳೆಲ್ಲರೂ ಅವನನ್ನು ಹಿಂಬಾಲಿಸುವರು. ಆದುದರಿಂದ, ಅಚ್ಯುತ, ಎಲ್ಲ ದೇವತೆಗಳೊಡನೆಯೂ ಸೆಣಸುವ ಈ ಹವ್ಯಾಸವನ್ನು ಸಾಕುಮಾಡು. ಯಾವ ಕೆಲಸವು ಪರಿಣಾಮದಲ್ಲಿ ಕೇಡನ್ನುಂಟುಮಾಡುವುದೋ ಅಂತಹ ಕೆಲಸ ವನ್ನು ಮಾಡಲೇಬಾರದೆಂದು ತಿಳಿದವರು ಹೇಳುವರು ಎಂದರು.

೩೮. ಆ ಮಾತನ್ನು ಕೇಳುತ್ತಲೇ, ಅತಿಕೋಪಸ್ವಭಾವವುಳ್ಳ ಸತ್ಯ ಭಾಮೆಯು ಆ ಕಾವಲುಗಾರರನ್ನು ಕುರಿತು

॥ ಸತ್ಯಭಾಮೋವಾಚ ॥

ಕಾ ಶಚೀ ಪಾರಿಜಾತಸ್ಯ ಕೋ ವಾ ಶಕ್ರಃ ಸುರಾಧಿಪಃ ।
ಸಾಮಾನ್ಯಃ ಸರ್ವಲೋಕಾನಾಂ ಯದ್ಯೇಷೋಽಮೃತಮಂಥನೇ ॥ ೩೯ ॥

ಸಮುತ್ಪನ್ನಃ ಪುರಾ ಕಸ್ಮಾದೇಕೋ ಗೃಹ್ಣಾತಿ ವಾಸವಃ ।
ಯಥಾ ಸುರಾ ಯಥಾ ಚೇಂದುರ್ಯಥಾ ಶ್ರೀರ್ವನರಕ್ಷಿಣಃ ॥ ೪೦ ॥

ಸಾಮಾನ್ಯಃ ಸರ್ವಲೋಕಸ್ಯ ಪಾರಿಜಾತಸ್ತಥಾ ದ್ರುಮಃ ।
ಭರ್ತೃಬಾಹುಮಹಾಗರ್ವಾದ್ರುಣದ್ಧ್ಯೇನಮಥೋ ಶಚೀ ॥ ೪೧ ॥

ತತ್ಕಥ್ಯತಾಂ ದ್ರುತಂ ಗತ್ವಾ ಪೌಲೋಮ್ಯಾ ವಚನಂ ಮಮ ।
ಸತ್ಯಭಾಮಾ ವದತ್ಯೇವಂ ಭರ್ತೃಗರ್ವೋದ್ಧತಾಕ್ಷರಂ ॥ ೪೨ ॥

ಯದಿ ತ್ವಂ ದಯಿತಾ ಭರ್ತುರ್ಯದಿ ತಸ್ಯ ಪ್ರಿಯಾ ಹ್ಯಸಿ ।
ಮದ್ಭರ್ತುರ್ಹರತೋ ವೃಕ್ಷಂ ತತ್ಕಾರಯ ನಿವಾರಣಂ ॥ ೪೩ ॥

---

೩೯-೪೦. ಶಚಿಯಾದರೇನು? ಅವರಿಗೂ ಪಾರಿಜಾತಕ್ಕೂ ಏನು ಸಂಬಂಧ? ಅಮೃತವನ್ನು ಕರೆಯುವಾಗ ಹುಟ್ಟಿತೆಂದಮೇಲೆ ಈ ಪಾರಿಜಾತವು ಎಲ್ಲ ಪ್ರಜೆಗಳಿಗೂ ಸೇರಿದ್ದಾಯಿತು. ಇಂದ್ರನೊಬ್ಬನೇ ಇದನ್ನು ಹೊಂದುವುದೆಂದರೆ ಹೇಗೆ ತಾನೇ ಯುಕ್ತವಾಗುವುದು? ಆ ಸಮಯದಲ್ಲಿ ಹುಟ್ಟಿದ ಸುರೆಯೂ, ಹೇಗೆ ಎಲ್ಲರಿಗೂ ಸೇರಿದುದೋ ಹಾಗೆಯೇ ಈ ವೃಕ್ಷವೂ ಎಲ್ಲ ಜನರಿಗೂ ಸೇರಿದ ವಸ್ತುವೇ ಅಲ್ಲವೇ?

೪೧-೪೨, ಒಂದುವೇಳೆ ಶಚಿಯೇನಾದರೂ ತನ್ನ ಪತಿಯಾದ ಇಂದ್ರನ ಬಾಹುಬಲದಿಂದ ಗರ್ವಿತಳಾಗಿ ಇದನ್ನು ತಡೆಯುವಂತೆ ಇದ್ದರೆ ನೀವೀಗಲೇ ಓಡಿಹೋಗಿ ಶಚಿಗೆ ಈ ಸತ್ಯಭಾಮೆಯೂ ತನ್ನ ಪ್ರಿಯನ ಬಾಹುಬಲವನ್ನು ಚೆನ್ನಾಗಿ ಅರಿತು ದರ್ಪದಿಂದ ಹೇಳಿಕಳುಹಿಸುವ ಮಾತನ್ನು ತಿಳಿಸಿ.

೪೩. ನೀನು ನಿಜವಾಗಿಯೂ ನಿನ್ನ ಗಂಡನಿಗೆ ಅಚ್ಚುಮೆಚ್ಚಿನ ಮಡದಿಯೇ ಆಗಿದ್ದಪಕ್ಷದಲ್ಲಿ ಆ ಪಾರಿಜಾತವೃಕ್ಷವನ್ನು ನನ್ನ ಪ್ರಿಯನು ತೆಗೆದುಕೊಂಡು ಹೋಗುವುದನ್ನು ನಿಲ್ಲಿಸುವಂತೆ ಮಾಡು.

**ಜಾನಾಮಿ ತೇ ಪತಿಂ ಶಕ್ರಂ ಜಾನಾಮಿ ತ್ರಿದಶೇಶ್ವರಂ ।**
**ಪಾರಿಜಾತಂ ತಥಾಪ್ಯೇನಂ ಮಾನುಷೀ ಹಾರಯಾಮಿ ತೇ ॥ ೪೪ ॥**

**॥ ವ್ಯಾಸ ಉವಾಚ ॥**

**ಇತ್ಯುಕ್ತಾ ರಕ್ಷಿಣೋ ಗತ್ವಾ ಪ್ರೋಚ್ಚೈಃ ಪ್ರೋಚುರ್ಯಥೋದಿತಂ ।**
**ಶಚೀ ಚೋತ್ಸಾಹಯಾಮಾಸ ತ್ರಿದಶಾಧಿಪತಿಂ ಪತಿಂ ॥ ೪೫ ॥**

**ತತಃ ಸಮಸ್ತದೇವಾನಾಂ ಸೈನ್ಯೈಃ ಪರಿವೃತ್ತೋ ಹರಿಂ ।**
**ಪ್ರವೃತ್ತಃ ಪಾರಿಜಾತಾರ್ಥಮಿಂದ್ರೋ ಯೋಧಯಿತುಂ ದ್ವಿಜಾಃ ॥ ೪೬ ॥**

**ತತಃ ಪರಿಘನಿಸ್ತ್ರಿಂಶಗದಾಶೂಲಧರಾಯುಧಾಃ ।**
**ಬಭೂವುಸ್ತ್ರಿದಶಾಃ ಸಜ್ಜಾಃ ಶಕ್ರೇ ವಜ್ರಕರೇ ಸ್ಥಿತೇ ॥ ೪೭ ॥**

**ತತೋ ನಿರೀಕ್ಷ್ಯ ಗೋವಿಂದೋ ನಾಗರಾಜೋಪರಿ ಸ್ಥಿತಂ ।**
**ಶಕ್ರಂ ದೇವಪರೀವಾರಂ ಯುದ್ಧಾಯ ಸಮುಪಸ್ಥಿತಂ ॥ ೪೮ ॥**

---

೪೪. ನಿನ್ನ ಗಂಡನು ಇಂದ್ರನೆಂಬುದನ್ನು ಬಲ್ಲೆ. ಆತನು ದೇವತೆಗಳಿಗೆಲ್ಲಾ ಒಡೆಯನೆಂಬುದನ್ನೂ ಅರಿತಿರುವೆನು. ಆದರೂ ನಿನ್ನ ಈ ಪಾರಿಜಾತವೃಕ್ಷವನ್ನು ಮನುಷ್ಯಮಾತ್ರಳಾದ ನಾನು ತೆಗೆದುಕೊಂಡೇ ಹೋಗುವೆನು ಎಂದಳು.

೪೫. ಎಲೈ ಬ್ರಾಹ್ಮಣರಿರಾ! ಈರೀತಿಯಾಗಿ ಸತ್ಯಭಾಮೆಯು ಹೇಳಿದ ಮಾತನ್ನು ವನಪಾಲಕರು ಶಚಿಗೆ ಬಂದು ಒಂದು ಚೂರೂ ಬಿಡದೆ ಗಟ್ಟಿಯಾಗಿ ತಿಳಿಸಿದರು. ಶಚಿಯು ತನ್ನ ಪತಿಯಾದ ದೇವರಾಜನನ್ನು ಪ್ರೋತ್ಸಾಹಿಸಿದಳು

೪೬. ಅನಂತರ ಇಂದ್ರನು ತನ್ನೆಲ್ಲ ದೇವಸೈನ್ಯಗಳೊಡನೆ ಕೂಡಿಕೊಂಡು ಪಾರಿಜಾತವೃಕ್ಷದ ಸಲುವಾಗಿ ಕೃಷ್ಣನೊಡನೆ ಹೋರಾಡಲು ಬಂದನು.

೪೭. ಇಂದ್ರನು ವಜ್ರಹಸ್ತನಾಗಿ ಬಂದುದನ್ನು ಕಂಡು ದೇವವೀರರೆಲ್ಲರೂ ಪರಿಘ, ಕತ್ತಿ, ಗದೆ, ಶೂಲ ಮೊದಲಾದ ಆಯುಧಗಳನ್ನು ಹಿಡಿದು ತಾವೂ ಸನ್ನದ್ಧರಾದರು.

೪೮-೪೯. ಬಳಿಕ ಶ್ರೀಕೃಷ್ಣನು ಇಂದ್ರನು ಐರಾವತವೆಂಬ ಗಜರಾಜನನ್ನು ಹತ್ತಿ ದೇವಸೈನ್ಯದೊಡನೆ ಕೂಡಿ ಯುದ್ಧಮಾಡಲು ಬರುತ್ತಿರುವುದನ್ನು

ಚಕಾರ ಶಂಖನಿರ್ಘೋಷಂ ದಿಶಃ ಶಬ್ದೇನ ಪೂರಯನ್ ।
ಮುಮೋಚ ಚ ಶರವ್ರಾತಂ ಸಹಸ್ರಾಯುತಸಂಮಿತಂ ॥ ೪೯ ॥

ತತೋ ದಿಶೋ ನಭಶ್ಚೈವ ದೃಷ್ಟ್ವಾ ಶರಶತಾಚಿತಂ ।
ಮುಮುಚುಸ್ತ್ರಿದಶಾಃ ಸರ್ವೇ ಶಸ್ತ್ರಾಣ್ಯಸ್ತ್ರಾಣ್ಯನೇಕಶಃ ॥ ೫೦ ॥

ಏಕೈಕಮಸ್ತ್ರಂ ಶಸ್ತ್ರಂ ಚ ದೇವೈರ್ಮುಕ್ತಂ ಸಹಸ್ರಧಾ ।
ಚಿಚ್ಛೇದ ಲೀಲಯೈವೇಶೋ ಜಗತಾಂ ಮಧುಸೂದನಃ ॥ ೫೧ ॥

ಪಾಶಂ ಸಲಿಲರಾಜಸ್ಯ ಸಮಾಕೃಷ್ಯೋರಗಾಶನಃ ।
ಚಚಾಲ ಖಂಡಶಃ ಕೃತ್ವಾ ಬಾಲಪನ್ನಗದೇಹವತ್ ॥ ೫೨ ॥

ಯಮೇನ ಪ್ರೇರಿತಂ ದಂಡಂ ಗದಾಪ್ರಕ್ಷೇಪಖಂಡಿತಂ ।
ಪೃಥಿವ್ಯಾಂ ಪಾತಯಾಮಾಸ ಭಗವಾನ್ದೇವಕೀಸುತಃ ॥ ೫೩ ॥

---

ಕಂಡು ತನ್ನ ಶಂಖವನ್ನು ಊದಿದನು. ಆ ಶಬ್ದದಿಂದ ದಿಕ್ಕುದಿಕ್ಕುಗಳೆಲ್ಲವೂ ತುಂಬಿಹೋದುವು. ಅನಂತರ ಒಂದೊಂದು ಬಾರಿಗೆ ಸಾವಿರ, ಹತ್ತುಸಾವಿರ ಗಳಂತೆ ಬಾಣಗಳನ್ನು ದೇವಸೈನ್ಯದಮೇಲೆ ಬಿಟ್ಟನು.

೫೦. ಈರೀತಿ ಶ್ರೀಕೃಷ್ಣನು ಬಿಟ್ಟ ಬಾಣಗಳಿಂದ ದಿಕ್ಕು, ಆಕಾಶ ಗಳೆಲ್ಲಾ ತುಂಬಿಹೋದುದನ್ನು ಕಂಡು ದೇವತೆಗಳೆಲ್ಲರೂ ಒಟ್ಟಿಗೆ ನಾನಾವಿಧ ವಾದ ತಮ್ಮತಮ್ಮ ಆಯುಧಗಳನ್ನೂ ಮಂತ್ರಾಸ್ತ್ರಗಳನ್ನೂ ಅವನ ಮೇಲೆ ಪ್ರಯೋಗಿಸಿದರು.

೫೧. ದೇವತೆಗಳು ಬಿಟ್ಟ ಒಂದೊಂದು ಶಸ್ತ್ರವನ್ನೂ ಅಸ್ತ್ರವನ್ನೂ ಆ ಮಧುಸೂದನನು ಲೀಲಾಮಾತ್ರದಿಂದಲೇ ಕತ್ತರಿಸಿಬಿಟ್ಟನು.

೫೨. ಆಗ ಶ್ರೀ ಕೃಷ್ಣನ ವಾಹನವಾದ ಗರುಡನು, ವರುಣನು ಬಿಟ್ಟ ಪಾಶವನ್ನು ಎಳೆದು ಹಾವಿನ ದೇಹವನ್ನು ತುಂಡುತುಂಡುಮಾಡುವಂತೆ ಛಿದ್ರ ಛಿದ್ರವಾಗಿ ಮಾಡಿದನು.

೫೩. ಆಗ ಯಮನು ಶ್ರೀಕೃಷ್ಣನಮೇಲೆ ತನ್ನ ದಂಡವನ್ನು ಪ್ರಯೋ ಗಿಸಲು ಆ ಭಗವಂತನು ತನ್ನ ಗದೆಯ ಒಂದೇ ಏಟಿನಿಂದ ಅದನ್ನು ನೆಲದ ಮೇಲೆ ತುಂಡುತುಂಡಾಗಿ ಕೆಡವಿಬಿಟ್ಟನು.

ಶಿಬಿಕಾಂ ಚ ಧನೇಶಸ್ಯ ಚಕ್ರೇಣ ತಿಲಶೋ ವಿಭುಃ ।
ಚಕಾರ ಶೌರಿರರ್ಕೇಂದೂ ದೃಷ್ಟಿಪಾತಹತೌಜಸೌ ॥ ೫೪ ॥

ನೀತೋಽಗ್ನಿಃ ಶತಶೋ ಬಾಣೈರ್ದ್ರಾವಿತಾ ವಸವೋ ದಿಶಃ ।
ಚಕ್ರವಿಚ್ಛಿನ್ನಶೂಲಾಗ್ರಾ ರುದ್ರಾ ಭುವಿ ನಿಪಾತಿತಾಃ ॥ ೫೫ ॥

ಸಾಧ್ಯಾ ವಿಶ್ವೇ ಚ ಮರುತೋ ಗಂಧರ್ವಾಶ್ಚೈವ ಸಾಯಕೈಃ ।
ಶಾರ್ಙ್ಗಿಣಾ ಪ್ರೇರಿತಾಃ ಸರ್ವೇ ವ್ಯೋಮ್ನಿ ಶಾಲ್ಮಲಿತೂಲವತ್ ॥ ೫೬ ॥

ಗರುಡಶ್ಚಾಪಿ ವಕ್ತ್ರೇಣ ಪಕ್ಷಾಭ್ಯಾಂ ಚ ನಖಾಂಕುರೈಃ ।
ಭಕ್ಷಯನ್ನಹನದ್ದೇವಾನ್ದಾನವಾಂಶ್ಚ ಸದಾ ಖಗಃ ॥ ೫೭ ॥

ತತಃ ಶರಸಹಸ್ರೇಣ ದೇವೇಂದ್ರಮಧುಸೂದನೌ ।
ಪರಸ್ಪರಂ ವವರ್ಷಾತೇ ಧಾರಾಭಿರಿವ ತೋಯದೌ ॥ ೫೮ ॥

---

೫೪. ಆ ಶೌರಿಯು ಕುಬೇರನ ಪಲ್ಲಕ್ಕಿಯನ್ನು ತನ್ನ ಸುದರ್ಶನ ಚಕ್ರದಿಂದ ಎಳ್ಳುಕಾಳಿನಷ್ಟು ಚೂರುಚೂರಾಗಿ ಮಾಡಿದುದಲ್ಲದೆ ತನ್ನ ದೃಷ್ಟಿ ಪಾಕಮಾತ್ರದಿಂದಲೇ (ನೋಟದಿಂದಲೇ) ಸೂರ್ಯಚಂದ್ರರನ್ನು ನಿಸ್ತೇಜಸ್ಕರ ನನ್ನಾಗಿ ಮಾಡಿದನು.

೫೫. ಅಗ್ನಿಯು ಕೃಷ್ಣನ ಬಾಣಗಳಿಗೆ ಸಿಕ್ಕಿ ನೂರಾರು ಚೂರುಚೂ ರಾಗಿ ಹೋದನು. ಅಷ್ಟವಸುಗಳು ದಿಕ್ಕೆಟ್ಟು ಓಡಿಹೋದರು. ಏಕಾದಶ ರುದ್ರರು ಚಕ್ರದ ಏಟಿಗೆ ಸಿಕ್ಕಿ ತಮ್ಮ ಶೂಲದ ಮೊನೆಗಳೆಲ್ಲವೂ ಮುರಿದು ಹೋಗಿ ಕೆಳಗೆ ಉರುಳಿದರು.

೫೬. ಕೃಷ್ಣನ ಬಾಣದ ವೇಗವನ್ನು ತಾಳಲಾರದೆ ಸಾಧ್ಯರೂ, ವಿಶ್ವೇ ದೇವತೆಗಳೂ, ಸಪ್ತಮರುತ್ತುಗಳೂ, ಗಂಧರ್ವರೂ, ಗಾಳಿಗೆ ಸಿಕ್ಕಿದ ಬೂರುಗದ ಹತ್ತಿಯಂತೆ ಅಂತರಿಕ್ಷದಲ್ಲಿ ತೂರಾಡಿದರು.

೫೭. ಗರುಡನೂ ಸಹ ತನ್ನ ಕೊಕ್ಕಿನಿಂದಲೂ, ರೆಕ್ಕೆಗಳಿಂದಲೂ ಉಗುರಿನ ಕೊನೆಗಳಿಂದಲೂ, ದೇವತೆಗಳನ್ನೂ ದಾನವರನ್ನೂ ಕುಕ್ಕುತ್ತಲೂ ಸೀಳುತ್ತಲೂ ಕೊಲ್ಲುತ್ತಾ ಬಂದನು.

೫೮. ಅನಂತರ ದೇವೇಂದ್ರನೂ ಶ್ರೀಕೃಷ್ಣನೂ ಮಳೆಯನ್ನು ಸುರಿಸುವ ಕಾರ್ಗಾಲದ ಮೋಡಗಳಂತೆ, ಸಾವಿರಾರು ಬಾಣಗಳನ್ನು ಒಬ್ಬೊಬ್ಬರಮೇಲೆ ಬಿಡತೊಡಗಿದರು.

ಐರಾವತೇನ ಗರುಡೋ ಯುಯುಧೇ ತತ್ರ ಸಂಕುಲೇ ।
ದೇವೈಃ ಸಮೇತೈರ್ಯುಯುಧೇ ಶಕ್ರೇಣ ಚ ಜನಾರ್ದನಃ ॥ ೫೯ ॥

ಭಿನ್ನೇಷು ಶೀರ್ಯಮಾಣೇಷು ಶಸ್ತ್ರೇಷ್ವಸ್ತ್ರೇಷು ಸತ್ವರಂ ।
ಜಗ್ರಾಹ ವಾಸವೋ ವಜ್ರಂ ಕೃಷ್ಣಶ್ಚಕ್ರಂ ಸುದರ್ಶನಂ ॥ ೬೦ ॥

ತತೋ ಹಾಹಾಕೃತಂ ಸರ್ವಂ ತ್ರೈಲೋಕ್ಯಂ ಸಚರಾಚರಂ ।
ವಜ್ರಚಕ್ರಧರೌ ದೃಷ್ಟ್ವಾ ದೇವರಾಜಜನಾರ್ದನೌ ॥ ೬೧ ॥

ಕ್ಷಿಪ್ರಂ ವಜ್ರಮಥೇಂದ್ರೇಣ ಜಗ್ರಾಹ ಭಗವಾನ್ಹರಿಃ ।
ನ ಮುಮೋಚ ತದಾ ಚಕ್ರಂ ತಿಷ್ಠ ತಿಷ್ಠೇತಿ ಚಾಬ್ರವೀತ್ ॥ ೬೨ ॥

---

೫೯. ಐರಾವತದೊಡನೆ ಗರುಡನು ಹೋರಾಡಿದನು. ಆಸಮಯದಲ್ಲಿ ದೇವತೆಗಳೆಲ್ಲರೂ ಒಟ್ಟಾಗಿ ಯುದ್ಧಮಾಡತೊಡಗಿದರು. ಶ್ರೀಕೃಷ್ಣನೊಬ್ಬನೇ ಅವರೆಲ್ಲರೊಡನೆಯೂ ಇಂದ್ರನೊಡನೆಯೂ ಯುದ್ಧಮಾಡಿದನು.

೬೦. ಆ ಯುದ್ಧದಲ್ಲಿ ಒಬ್ಬೊಬ್ಬರೂ ತಮ್ಮ ಶಕ್ತಿಯನ್ನೆಲ್ಲಾ ಉಪಯೋಗಿಸಿ ತಮ್ಮ ಶಸ್ತ್ರಗಳನ್ನೂ ಅಸ್ತ್ರಗಳನ್ನೂ ಉಪಯೋಗಿಸಿದರು. ಮರುಕ್ಷಣದಲ್ಲಿಯೇ ಎದುರಾಳಿಗಳ ಏಟಿನಿಂದ ಅವುಗಳಲ್ಲಿ ಕೆಲಕೆಲವು ಕತ್ತರಿಸಿ ಹೋದುವು. ಕೆಲಕೆಲವು ತುಂಡಾಗುತ್ತಿದ್ದುವು. ಆಗ ಇಂದ್ರನು ವಜ್ರಾಯುಧವನ್ನೂ ಶ್ರೀ ಕೃಷ್ಣನು ಸುದರ್ಶನ ಚಕ್ರವನ್ನೂ ಕೈಗೆ ತೆಗೆದುಕೊಂಡರು.

೬೧. ಈರೀತಿ ಅವರಿಬ್ಬರೂ ವಜ್ರವನ್ನೂ ಚಕ್ರವನ್ನೂ ಕೈಗೆ ತೆಗೆದುಕೊಂಡುದನ್ನು ಕಂಡು ಚರಾಚರಾತ್ಮಕವಾದ ಮೂರು ಲೋಕಗಳೂ ಹಾಹಾಕಾರಮಾಡತೊಡಗಿದುವು.

೬೨. ಆಗ ಇಂದ್ರನು ಕೃಷ್ಣನಮೇಲೆ ತನ್ನ ವಜ್ರಾಯುಧವನ್ನು ಪ್ರಯೋಗಿಸಿದನು. ಆದರೇನು ? ಶ್ರೀಕೃಷ್ಣನು ಅದನ್ನು ಕೈಚಳಕದಿಂದ ಹಿಡಿದುಬಿಟ್ಟನು. ಶ್ರೀಕೃಷ್ಣನು ತನ್ನ ಚಕ್ರವನ್ನು ಮಾತ್ರ ಬಿಡಲಿಲ್ಲ. ಆಗ ಶ್ರೀಕೃಷ್ಣನು ಅವನನ್ನು ಕುರಿತು ನಿಲ್ಲುನಿಲ್ಲು ಎಂದು ಕೂಗಿಹೇಳಿದನು.

ಪ್ರನಷ್ಟವಜ್ರಂ ದೇವೇಂದ್ರಂ ಗರುಡಕ್ಷತವಾಹನಂ ।
ಸತ್ಯಭಾಮಾಬ್ರವೀದ್ವಾಕ್ಯಂ ಪಲಾಯನಪರಾಯಣಂ　　॥ ೬೩ ॥

॥ ಸತ್ಯಭಾಮೋವಾಚ

ತ್ರೈಲೋಕ್ಯೇಶ್ವರ ನೋ ಯುಕ್ತಂ ಶಚೀಭರ್ತುಃ ಪಲಾಯನಂ ।
ಪಾರಿಜಾತಸ್ರಗಾಭೋಗಾತ್ವಾಮುಪಸ್ಥಾಸ್ಯತೇ ಶಚೀ　　॥ ೬೪ ॥

ಕೀದೃಶಂ ದೇವ ರಾಜ್ಯಂ ತೇ ಪಾರಿಜಾತಸ್ರಗುಜ್ಜ್ವಲಾಂ ।
ಅಪಶ್ಯತೋ ಯಥಾಪೂರ್ವಂ ಪ್ರಣಯಾಭ್ಯಾಗತಂ ಶಚೀಂ　　॥ ೬೫ ॥

ಅಲಂ ಶಕ್ರ ಪ್ರಯಾಸೇನ ನ ವ್ರೀಡಾಂ ಯಾತುಮರ್ಹಸಿ ।
ನೀಯತಾಂ ಪಾರಿಜಾತೋಽಯಂ ದೇವಾಃ ಸಂತು ಗತವ್ಯಥಾಃ　　॥ ೬೬ ॥

---

೬೩. ಈರೀತಿ ತಾನು ಬಿಟ್ಟ ವಜ್ರವು ಹಾಳಾದುದನ್ನೂ ತನ್ನ ವಾಹನವಾದ ಐರಾವತವು ಗರುಡನಿಂದ ಬಹುವಾಗಿ ಗಾಯಗೊಂಡಿರುವುದನ್ನೂ ಕಂಡು ಕಾಲಿಗೆ ಬುದ್ಧಿಹೇಳತೊಡಗಿದ್ದ ಇಂದ್ರನನ್ನು ಕರೆದು ಕೂಗುತ್ತಾ ಸತ್ಯಭಾಮೆಯು ಇಂತೆಂದಳು.

೬೪. ಓ ತ್ರಿಲೋಕಾಧಿಪತೀ! ಈರೀತಿ ಓಡಿಹೋಗುವುದು ಶಚಿಯ ಭರ್ತೃವಾದ ನಿನಗೆ ಯುಕ್ತವಲ್ಲ. ಆ ಶಚಿಯು ಪಾರಿಜಾತಪುಷ್ಪವನ್ನು ಮುಡಿದುಕೊಳ್ಳಲೋಸುಗ ನಿನ್ನನ್ನೇ ನಿರೀಕ್ಷಿಸುತ್ತಾ ನಿಂತಿರುವಳು.

೬೫. ಶಚಿಯು ಎಂದಿನಂತೆ ಪಾರಿಜಾತದ ಪುಷ್ಪವನ್ನು ಧರಿಸಿ ಸೌಂದರ್ಯದಿಂದ ಮೆರೆಯುತ್ತಾ ಪ್ರೀತಿಯಿಂದ ಬಳಿಗೆ ಬರುತ್ತಿರುವುದನ್ನು ಕಾಣದಿದ್ದ ಮೇಲೆ ನಿನ್ನ ಈ ಸ್ವರ್ಗಾಧಿಪತ್ಯವೆಂತಹುದು?

೬೬. ಆದುದರಿಂದ ಎಲೈ ಇಂದ್ರನೇ, ನಿನ್ನ ಈ ಪ್ರಯಾಸವನ್ನು ಸಾಕು ಮಾಡು. ನೀನು ನಾಚಿಕೆಪಡಬೇಕಾಗಿಲ್ಲ. ಈ ಪಾರಿಜಾತವನ್ನು ತೆಗೆದುಕೊಂಡು ಹೋಗಬಹುದು. ದೇವತೆಗಳೆಲ್ಲರೂ ತಮ್ಮ ಮನಸ್ಸಿನ ವ್ಯಥೆಯನ್ನು ತೊರೆಯಲಿ.

ಪತಿಗರ್ವಾವಲೇಪೇನ ಬಹುಮಾನಪುರಃಸರಂ ।
ನ ದದರ್ಶ ಗೃಹಾಯಾತಾಮುಪಚಾರೇಣ ಮಾಂ ಶಚೀ ॥ ೬೭ ॥

ಸ್ತ್ರೀತ್ವಾದಗುರುಚಿತ್ತಾಹಂ ಸ್ವಭರ್ತುಃ ಶ್ಲಾಘನಾಪರಾ ।
ತತಃ ಕೃತವತೀ ಶಕ್ರ ಭವತಾ ಸಹ ವಿಗ್ರಹಂ ॥ ೬೮ ॥

ತದಲಂ ಪಾರಿಜಾತೇನ ಪರಸ್ವೇನ ಹೃತೇನ ವಾ ।
ರೂಪೇಣ ಯಶಸಾ ಚೈವ ಭವೇತ್ಸ್ತ್ರೀ ಕಾ ನ ಗರ್ವಿತಾ ॥ ೬೯ ॥

॥ ವ್ಯಾಸ ಉವಾಚ ॥

ಇತ್ಯುಕ್ತೇ ವೈ ನಿವವೃತೇ ದೇವರಾಜಸ್ತಯಾ ದ್ವಿಜಾಃ ।
ಪ್ರಾಹ ಚೈನಾಮಲಂ ಚಂಡಿ ಸಖಿ ಖೇದಾತಿವಿಸ್ತರೈಃ ॥ ೭೦ ॥

ನ ಚಾಪಿ ಸರ್ಗಸಂಹಾರಸ್ಥಿತಿಕರ್ತಾಖಿಲಸ್ಯ ಯಃ ।
ಜಿತಸ್ಯ ತೇನ ಮೇ ವ್ರೀಡಾ ಜಾಯತೇ ವಿಶ್ವರೂಪಿಣಾ ॥ ೭೧ ॥

---

೬೭. ನಾನು ಮನೆಗೆ ಬಂದಿದ್ದಾಗ ಶಚಿಯು ತಾನು ದೇವರಾಜನಪತ್ನಿಯೆಂಬ ಅಹಂಕಾರದಿಂದ ನನ್ನನ್ನು ಸರಿಯಾಗಿ ಗೌರವಿಸಿ ಉಪಚಾರ ಮಾಡಲಿಲ್ಲ.

೬೮. ಓ ಇಂದ್ರ, ನಾನು ಎಷ್ಟಾದರೂ ಹೆಂಗಸು. ನಮ್ಮ ಮನಸ್ಸು ಬಹು ಸೂಕ್ಷ್ಮ. ಆದುದರಿಂದಲೇ ನನ್ನ ಗಂಡನ ಯೋಗ್ಯತೆಯೇ ಹೆಚ್ಚಿನದೆಂದು ತೋರಿಸುವಸಲುವಾಗಿ ನಿನ್ನೊಡನೆ ಯುದ್ಧವನ್ನು ಹೂಡಿದೆನು.

೬೯. ಆದುದರಿಂದ ಈ ಪರಧನವಾದ ಪಾರಿಜಾತವೃಕ್ಷವನ್ನು ಅಪಹರಿಸಿ ನನಗೆ ಆಗಬೇಕಾದುದೇನು? ಇದನ್ನು ಕೊಂಡಯ್ಯಲಾರೆಯಾ? ಯಾವ ಹೆಂಗಸುತಾನೇ ರೂಪದಿಂದಲೂ ಯಶಸ್ಸಿನಿಂದಲೂ ಗರ್ವಿತಳಾಗದೇ ಇದ್ದಾಳು?

೭೦. ಎಲೈ ಬ್ರಾಹ್ಮಣರಿರಾ! ಈರೀತಿಯಾಗಿ ಸತ್ಯಭಾಮೆಯು ಹೇಳಿದುದನ್ನು ಕೇಳಿ ಇಂದ್ರನು ಹಿಂದಿರುಗಿ ಬಂದನು. ಅನಂತರ ಅವಳನ್ನು ಕುರಿತು ಹಿಡಿದ ಹಟವನ್ನು ಬಿಡದೆ ಸಾಧಿಸುವ ಎಲೌ ಸಖಿಯೇ! ನನ್ನ ಖೇದವನ್ನು ವಿಸ್ತಾರವಾಗಿ ವರ್ಣಿಸುವುದನ್ನು ಸಾಕುಮಾಡು.

೭೧. ಯಾವನು ಸಕಲ ಪ್ರಪಂಚಕ್ಕೂ ಸೃಷ್ಟಿಕರ್ತನೂ, ಪಾಲಕನೂ ಸಂಹಾರಕರ್ತೃವೂ ಆಗಿರುವನೋ, ಆ ವಿಶ್ವರೂಪಿನಿಂದಲೇ ಸೋಲಿಸಲ್ಪಟ್ಟಿರುವೆನಾದುದರಿಂದ ನಾನೇಕೆ ನಾಚಿಕೆ ಪಡಲಿ? (ನನಗದು ನಾಚಿಕೆಯೇ ಅಲ್ಲವು.)

ಯಸ್ಮಿನ್ ಜಗತ್ಸಕಲಮೇತದನಾದಿಮಧ್ಯೇ
ಯಸ್ಮಾದ್ಯತಶ್ಚ ನ ಭವಿಷ್ಯತಿ ಸರ್ವಭೂತಾತ್ ।
ತೇನೋದ್ಭವಪ್ರಲಯಪಾಲನಕಾರಣೇನ
ವ್ರೀಡಾ ಕಥಂ ಭವತಿ ದೇವಿ ನಿರಾಕೃತಸ್ಯ ॥ ೭೨ ॥

ಸಕಲಭುವನಮೂರ್ತೇರ್ಮೂರ್ತಿರಲ್ಪಾ ಸುಸೂಕ್ಷ್ಮಾ
ವಿದಿತಸಕಲವೇದ್ಯೈರ್ಜ್ಞಾಯತೇ ಯಸ್ಯ ನಾನ್ಯೈಃ ।
ತಮಜಮಕೃತಮೀಶಂ ಶಾಶ್ವತಂ ಸ್ವೇಚ್ಛಯೈನಂ
ಜಗದುಪಕೃತಿಮಾದ್ಯಂ ಕೋ ವಿಜೇತುಂ ಸಮರ್ಥಃ ॥ ೭೩ ॥

ಇತಿ ಶ್ರೀಮಹಾಪುರಾಣೇ ಆದಿಬ್ರಾಹ್ಮೇ ಪಾರಿಜಾತಹರಣೇ ಶಕ್ರಸ್ತವ-
ನಿರೂಪಣಂ ನಾಮ ತ್ರ್ಯಧಿಕದ್ವಿಶತತಮೋಽಧ್ಯಾಯಃ

---

೭೨. ಈ ಸಕಲ ಪ್ರಪಂಚವೂ ಯಾವಾತನಲ್ಲಿ ನೆಲೆಸಿರುವುದೋ, ಮತ್ತು ಯಾವಾತನಿಂದಲೇ ನಾಶವನ್ನೈದುವುದೋ, ಅಂತಹ ಆದ್ಯಂತರಹಿತನೂ, ಸೃಷ್ಟಿ ಸ್ಥಿತಿ ಸಂಹಾರಕರ್ತೃವೂ ಆದ ಪರಮಪುರುಷನಿಂದಲೇ ಸೋಲಿಸಲ್ಪಟ್ಟ ನನಗೆ ನಾಚಿಕೆಯಾದರೂ ಆಗುವುದು ಹೇಗೆ ?

೭೩. ಸಕಲಭುವನಸ್ವರೂಪನಾದ ಯಾವ ಪರಮಪುರುಷನ ಅತ್ಯಲ್ಪವೂ ಬಹು ಸೂಕ್ಷ್ಮವೂ ಆದ ಸ್ವರೂಪವನ್ನು ಸಕಲ ವೇದಾರ್ಥಗಳನ್ನೂ ಬಲ್ಲವರಾಗಿದ್ದರೂ ಇತರರು ತಿಳಿಯಲಾರರೋ ಅಂತಹ ಜನ್ಮರಹಿತನೂ, ಕಾರಣಶೂನ್ಯನೂ, ಶಾಶ್ವತನೂ, ಪ್ರಭುವೂ, ಜಗದುಪಕಾರನಿರತನೂ, ಆದಿಪುರುಷನೂ ಆದ ಈತನನ್ನು ಯಾವನು ತಾನೇ ತನ್ನಿಚ್ಛೆಯಂತೆ ಗೆಲ್ಲಲು ಶಕ್ತನಾಗುವನು ಎಂದನು.

ಇಲ್ಲಿಗೆ ಶ್ರೀಬ್ರಹ್ಮಪುರಾಣದಲ್ಲಿ ಇಂದ್ರಕೃಷ್ಣರ ಯುದ್ಧದವರ್ಣನವೆಂಬ ಇನ್ನೂರ ಮೂರನೆಯ ಅಧ್ಯಾಯವು ಮುಗಿದುದು.

ಶ್ರೀಃ

ಓಂ ತತ್ಸದ್ಬ್ರಹ್ಮಣೇನಮಃ

# ಅಥ ಮಹಾಪುರಾಣೇ ಬ್ರಾಹ್ಮೇ

## ಚತುರಧಿಕದ್ವಿಶತತಮೋಽಧ್ಯಾಯಃ

॥ ವ್ಯಾಸ ಉವಾಚ ॥

ಸಂಸ್ತುತೋ ಭಗವಾನಿತ್ಥಂ ದೇವರಾಜೇನ ಕೇಶವಃ ।
ಪ್ರಹಸ್ಯ ಭಾವಗಂಭೀರಮುವಾಚೇದಂ ದ್ವಿಜೋತ್ತಮಾಃ ॥ ೧ ॥

ಶ್ರೀಭಗವಾನುವಾಚ ॥

ದೇವರಾಜೋ ಭವಾನಿಂದ್ರೋ ವಯಂ ಮರ್ತ್ಯಾ ಜಗತ್ಪತೇ ।
ಕ್ಷಂತವ್ಯಂ ಭವತೈವೈತದಪರಾಧಕೃತಂ ಮಮ ॥ ೨ ॥

ಪಾರಿಜಾತತರುಶ್ಚಾಯಂ ನೀಯತಾಮುಚಿತಾಸ್ಪದಂ ।
ಗೃಹೀತೋಽಯಂ ಮಯಾ ಶಕ್ರ ಸತ್ಯಾವಚನಕಾರಣಾತ್ ॥ ೩ ॥

---

### ಇನ್ನೂರನಾಲ್ಕನೆಯ ಅಧ್ಯಾಯವು

೧. ಎಲೈ ದ್ವಿಜಶ್ರೇಷ್ಠರಿರಾ! ಈರೀತಿಯಾಗಿ ದೇವರಾಜನಾದ ಇಂದ್ರನು ತನ್ನನ್ನು ಸ್ತುತಿಸಲು ಶ್ರೀಕೃಷ್ಣನು ನಸುನಕ್ಕು ಅವನನ್ನು ಕುರಿತು ಭಾವಗರ್ಭಿತವೂ ಅರ್ಥಪೂರ್ಣವೂ ಆದ ಮಾತನ್ನಾಡಿದನು.

೨. ಎಲೈ ತ್ರಿಲೋಕಾಧಿಪತಿಯೇ! ನೀನೆಷ್ಟಾದರೂ ದೇವತೆಗಳ ಒಡೆಯನಾದ ಇಂದ್ರನು. ನಾವು ಮನುಷ್ಯರು. ಆದುದರಿಂದ ನಾನು ಮಾಡಿದ ಈ ತಪ್ಪನ್ನು ನೀನು ಮನ್ನಿಸಬೇಕು.

೩. ಓ ಇಂದ್ರ! ನಾನು ಸತ್ಯಳ ಮಾತನ್ನು ಕೇಳಿ ಈ ಪಾರಿಜಾತ ವೃಕ್ಷವನ್ನು ತೆಗೆದುಕೊಂಡಿದ್ದೆನು. ಇದನ್ನು ಅದಕ್ಕೆ ತಕ್ಕ ಸ್ಥಾನದಲ್ಲಿ ತೆಗೆದುಕೊಂಡು ಹೋಗಿ ನಿಲ್ಲಿಸು.

ವಜ್ರಂ ಚೇದಂ ಗೃಹಾಣ ತ್ವಂ ಯಸ್ತ್ವಯ್ಯಂ ಪ್ರಹಿತಂ ತ್ವಯಾ ।
ತವೈವೈತತ್ಪ್ರಹರಣಂ ಶಕ್ರ ವೈರಿವಿದಾರಣಂ ॥ ೪ ॥

॥ ಶಕ್ರ ಉವಾಚ ॥

ವಿಮೋಹಯಸಿ ಮಾಮೀಶ ಮರ್ತ್ಯೋಽಹಮಿತಿ ಕಿಂ ವದನ್ ।
ಜಾನೀಮಸ್ತ್ವಾಂ ಭಗವತೋಽನಂತಸೌಖ್ಯವಿದೋ ವಯಂ ॥ ೫ ॥

ಯೋಽಸಿ ಸೋಽಸಿ ಜಗನ್ನಾಥ ಪ್ರವೃತೌ ನಾಥ ಸಂಸ್ಥಿತಃ ।
ಜಗತಃ ಶಲ್ಯನಿಷ್ಕರ್ಷಂ ಕರೋಷ್ಯಸುರಸೂದನ ॥ ೬ ॥

ನೀಯತಾಂ ಪಾರಿಜಾತೋಽಯಂ ಕೃಷ್ಣ ದ್ವಾರವತೀಂ ಪುರೀಂ ।
ಮರ್ತ್ಯಲೋಕೇ ತ್ವಯಾ ಮುಕ್ತೇ ನಾಯಂ ಸಂಸ್ಥಾಸ್ಯತೇ ಭುವಿ ॥ ೭ ॥

---

೪. ನೀನು ನನ್ನ ಮೇಲೆ ಪ್ರಯೋಗಿಸಿದ ವಜ್ರಾಯುಧವಿದೋ! ಇದನ್ನೂ ನೀನೇ ತೆಗೆದುಕೋ. ಶತ್ರುಗಳನ್ನು ಭೇದಿಸುವಂತಹ ಈ ವಜ್ರವು ನಿನಗೆ ಆಯುಧವಾಗಿರಲು ಯುಕ್ತವಾದುದು ಎಂದನು.

೫. ಈರೀತಿ ಶ್ರೀಕೃಷ್ಣನಾಡಿದ ಮಾತನ್ನು ಕೇಳಿ ಇಂದ್ರನು ಎಲೈ ಪ್ರಭುವೇ, ಇದೇನೀರೀತಿ ನಾನು ಮಾನವನೆಂದು ಹೇಳಿಕೊಳ್ಳುತ್ತಾ ನನ್ನನ್ನು ಮರುಳುಗೊಳಿಸುವೆ. ಭಗವಂತನ ಅನಂತವಾದ ಸುಖಸ್ವರೂಪವನ್ನು ಕಂಡಿರುವ ನಾವು ನೀನು ಯಾರೆಂದು ಚೆನ್ನಾಗಿ ಬಲ್ಲೆವು.

೬. ಓ ಜಗತ್ಪ್ರಭು, ಅಸುರನಿಷೂದನ, ನೀನು ಯಾರಾದರೂ ಆಗಿರು. ಈಗ ಮಾತ್ರ ಪ್ರವೃತ್ತಿಮಾರ್ಗದಲ್ಲಿ ತೊಡಗಿ ಜಗತ್ತಿನ ಕಂಟಕಗಳನ್ನು ನಿರ್ಮೂಲಮಾಡತೊಡಗಿರುವೆ.

೭. ಓ ಕೃಷ್ಣ! ಈ ಪಾರಿಜಾತವೃಕ್ಷವನ್ನು ನೀನು ದ್ವಾರಕೆಗೇ ತೆಗೆದುಕೊಂಡುಹೋಗು. ನಿನ್ನ ಅವತಾರ ಸಮಾಪ್ತಿಯಾದನಂತರ ಇದು ಭೂಮಿಯಲ್ಲಿ ನಿಲ್ಲಲಾರದು ಎಂದನು.

॥ ವ್ಯಾಸ ಉವಾಚ ॥

ತಥೇತ್ಯುಕ್ತ್ವಾ ತು ದೇವೇಂದ್ರಮಾಜಗಾಮ ಭುವಂ ಹರಿಃ ।
ಪ್ರಯುಕ್ತೈಃ ಸಿದ್ಧಗಂಧರ್ವೈಃ ಸ್ತೂಯಮಾನಸ್ತ್ವಥರ್ಷಿಭಿಃ ॥ ೮ ॥

ಜಗಾಮ ಕೃಷ್ಣಃ ಸಹಸಾ ಗೃಹೀತ್ವಾ ಪಾದಪೋತ್ತಮಂ ।
ತತಃ ಶಂಖಮುಪಾಧ್ಮಾಯ ದ್ವಾರಕೋಪರಿ ಸಂಸ್ಥಿತಃ ॥ ೯ ॥

ಹರ್ಷಮುತ್ಪಾದಯಾಮಾಸ ದ್ವಾರಕಾವಾಸಿನಾಂ ದ್ವಿಜಾಃ ।
ಅವತೀರ್ಯಾಥ ಗರುಡಾತ್ಸತ್ಯಭಾಮಾಸಹಾಯವಾನ್ ॥ ೧೦ ॥

ನಿಷ್ಕುಟೇ ಸ್ಥಾಪಯಾಮಾಸ ಪಾರಿಜಾತಂ ಮಹಾತರುಂ ।
ಯಮಭ್ಯೇತ್ಯ ಜನಃ ಸರ್ವೋ ಜಾತಿಂ ಸ್ಮರತಿ ಪೌರ್ವಿಕೀಂ ॥ ೧೧ ॥

ವಾಸ್ಯತೇ ಯಸ್ಯ ಪುಷ್ಪಾಣಾಂ ಗಂಧೇನೋರ್ವೀ ತ್ರಿಯೋಜನಂ ।
ತತಸ್ತೇ ಯಾದವಾಃ ಸರ್ವೇ ದೇವಗಂಧಾನಮಾನುಷಾನ್ ॥ ೧೨ ॥

---

೮-೯. ಎಲೈ ದ್ವಿಜರೇ, ಆಗ ಕೃಷ್ಣನು ಹಾಗೆಯೇ ಆಗಲೆಂದು ನುಡಿದು ಆ ಪಾರಿಜಾತವೃಕ್ಷವನ್ನು ತೆಗೆದು ಕೊಂಡು, ಸಿದ್ಧರಿಂದಲೂ, ಗಂಧರ್ವರಿಂದಲೂ ಋಷಿಗಳಿಂದಲೂ ಸ್ತುತಿಸಲ್ಪಡುತ್ತಾ ಭೂಲೋಕದ ಕಡೆಗೆ ಹೊರಟು ಸರ್‍ರನೆ ದ್ವಾರಕೆಯಮೇಲೆ ಬಂದು ನಿಂತು ತನ್ನ ಪಾಂಚಜನ್ಯವನ್ನು ಊದಿದನು.

೧೦-೧೧. ಆ ಶಂಖನಿನಾದವನ್ನು ಕೇಳುತ್ತಲೇ ದ್ವಾರಕಾನಿವಾಸಿಗಳಿಗೆಲ್ಲಾ ಮಿತಿಮೀರಿದ ಹರ್ಷವುಂಟಾಯಿತು. ಅನಂತರ ಸತ್ಯಭಾಮೆಯೊಡನೆ ಗರುಡನ ಹೆಗಲಿನಿಂದ ಕೆಳಗಿಳಿದು ಆ ಪಾರಿಜಾತವೆಂಬ ಭಾರಿ ಮರವನ್ನು ತನ್ನ ಉದ್ಯಾನದಲ್ಲಿ ನೆಡಸಿದನು. (ಅದರ ಮಹಿಮೆಯನ್ನು ಏನೆಂದು ಹೇಳೋಣ? ಆ ವೃಕ್ಷದ ಬಳಿಗೆ ಯಾರು ಬರುವರೋ ಅವರೆಲ್ಲರಿಗೂ ತಮ್ಮ ಪೂರ್ವಜನ್ಮದ ನೆನಪುಂಟಾಗುವುದು.

೧೨. ಮತ್ತು ಆ ವೃಕ್ಷದ ಹೂಗಳ ಸುವಾಸನೆಯಿಂದ ಸುತ್ತಮುತ್ತ ಮೂರು ಗಾವುದದಷ್ಟು ಪ್ರದೇಶವು ಗಮಗಮಗುಟ್ಟುತಿರುವುದು. ) ಬಳಿಕ ಯಾದವರು ಆ ಪಾರಿಜಾತದ ಬಳಿ ಮುಖವಿಡುತ್ತಲೇ ಮನುಷ್ಯದುರ್ಲಭವಾದ ದೇವಯೋಗವಾದ ಪರಿಮಳವನ್ನು ಆಘ್ರಾಣಿಸಿದರು.

ದದೃಶುಃ ಪಾದಪೇ ತಸ್ಮಿನ್ಸರ್ವತೋ ಮುಖದರ್ಶನಂ ।
ಕಿಂಕರೈಃ ಸಮುಪಾನೀತಂ ಹಸ್ತ್ಯಶ್ವಾದಿ ತತೋ ಧನಂ ॥ ೧೩ ॥

ಸ್ತ್ರಿಯಶ್ಚ ಕೃಷ್ಣೋ ಜಗ್ರಾಹ ನರಕಸ್ಯ ಪರಿಗ್ರಹಾತ್ ।
ತತಃ ಕಾಲೇ ಶುಭೇ ಪ್ರಾಪ್ತ ಉಪಯೇಮೇ ಜನಾರ್ದನಃ ॥ ೧೪ ॥

ತಾಃ ಕನ್ಯಾ ನರಕಾವಾಸಾತ್ಸರ್ವತೋ ಯಾಃ ಸಮಾಹೃತಾಃ ।
ಏಕಸ್ಮಿನ್ನೇವ ಗೋವಿಂದಃ ಕಾಲೇನಾಸಾಂ ದ್ವಿಜೋತ್ತಮಾಃ ॥ ೧೫ ॥

ಜಗ್ರಾಹ ವಿಧಿವತ್ಪಾಣೀನ್ಪೃಥಗ್ದೇಹೇ ಸ್ವಧರ್ಮತಃ ।
ಷೋಡಶ ಸ್ತ್ರೀಸಹಸ್ರಾಣಿ ಶತಮೇಕಂ ತಥಾಧಿಕಂ ॥ ೧೬ ॥

ತಾವಂತಿ ಚಕ್ರೇ ರೂಪಾಣಿ ಭಗವಾನ್ಮಧುಸೂದನಃ ।
ಏಕೈಕಶಶ್ಚ ತಾಃ ಕನ್ಯಾ ಮೇನಿರೇ ಮಧುಸೂದನಂ ॥ ೧೭ ॥

---

೧೩. ಅನಂತರ ಶ್ರೀಕೃಷ್ಣನು ನರಕಾಸುರನಬಳಿಯಿಂದ ತನ್ನ ಸೇವಕರು ತೆಗೆದುಕೊಂಡುಬಂದು ಒಪ್ಪಿಸಿದ ಆನೆ ಕುದುರೆ ಮೊದಲಾದ ಸೈನ್ಯವನ್ನೂ ಬೊಕ್ಕಸವನ್ನೂ, ಸ್ತ್ರೀಯರನ್ನೂ ಪರಿಗ್ರಹಿಸಿದನು.

೧೪-೧೬. ಬಳಿಕ ಒಂದಾನೊಂದು ಶುಭದಿವಸದಲ್ಲಿ ಜನಾರ್ದನನು ನರಕಾಸುರನ ಬಳಿಯಿಂದ ಬಿಡಿಸಿಕೊಂಡು ತರಲ್ಪಟ್ಟಿದ್ದ ಆ ಕನ್ಯೆಯರನ್ನೆಲ್ಲಾ ಮದುವೆ ಮಾಡಿಕೊಂಡನು. ಎಲೈ ಬ್ರಾಹ್ಮಣೋತ್ತಮರಿರಾ! ಗೋವಿಂದನು ಬೇರೆಬೇರೆ ದೇಹಗಳನ್ನು ಧರಿಸಿ ಒಂದೇ ಕಾಲದಲ್ಲಿ ವಿಧಿವತ್ತಾಗಿ ಆ ಕನ್ಯೆಯರ ಪಾಣಿಗ್ರಹಣವನ್ನು ಮಾಡಿದನು.

೧೭-೧೮. ಆ ಕನ್ಯೆಯರು ಹದಿನಾರುಸಾವಿರದ ಒಂದು ಮುಂದಿಯಿದ್ದರು. ಅದಕ್ಕೆ ಅನುಗುಣವಾಗಿ ಮಧುಸೂದನನು ತಾನೂ ಅಷ್ಟೇ ರೂಪಗಳನ್ನು ತಾಳಿದನು. ಒಬ್ಬೊಬ್ಬ ಕನ್ಯೆಯೂ ತನ್ನನ್ನುಮಾತ್ರವೇ ಶ್ರೀಕೃಷ್ಣನು ಮದುವೆಯಾದುದಾಗಿ

ಮನ್ಯೈವ ಪಾಣಿಗ್ರಹಣಂ ಗೋವಿಂದಃ ಕೃತವಾನಿತಿ ।
ನಿಶಾಸು ಜಗತಃ ಸ್ರಷ್ಟಾ ತಾಸಾಂ ಗೇಹೇಷು ಕೇಶವಃ ।
ಉವಾಸ ವಿಪ್ರಾಃ ಸರ್ವಾಸಾಂ ವಿಶ್ವರೂಪಧರೋ ಹರಿಃ ॥ ೧೮ ॥

ಇತಿ ಶ್ರೀಮಹಾಪುರಾಣೇ ಆದಿಬ್ರಾಹ್ಮೇ ಶ್ರೀಕೃಷ್ಣಚರಿತೇ
ಚತುರಧಿಕದ್ವಿಶತತಮೋಽಧ್ಯಾಯಃ

---

ಭಾವಿಸಿದ್ದಳು. ಜಗತ್ಪ್ರಭುವಾದ ಕೇಶವನು ರಾತ್ರಿಯವೇಳೆ ಪ್ರತ್ಯೇಕಪ್ರತ್ಯೇಕವಾದ ಅನಂತ ರೂಪಗಳನ್ನು ಧರಿಸಿ ಆ ಕನ್ಯೆಯರೆಲ್ಲರ ಮನಸ್ಸಿನಲ್ಲಿಯೂ ಇದ್ದನು.

ಇಲ್ಲಿಗೆ ಶ್ರೀ ಬ್ರಹ್ಮಪುರಾಣದಲ್ಲಿ ಶ್ರೀಕೃಷ್ಣಚರಿತ್ರೆಯಲ್ಲಿ ಇನ್ನೂರ ನಾಲ್ಕನೆಯ ಅಧ್ಯಾಯವು ಮುಗಿದುದು.



ಶ್ರೀಃ

ಓಂ ತತ್ಸದ್ಬ್ರಹ್ಮಣೇ ನಮಃ

# ಅಥ ಬ್ರಾಹ್ಮೇ ಮಹಾಪುರಾಣೇ

## ಪಂಚಾಧಿಕದ್ವಿಶತತಮೋಽಧ್ಯಾಯಃ

॥ ವ್ಯಾಸ ಉವಾಚ ॥

ಪ್ರದ್ಯುಮ್ನಾದ್ಯಾ ಹರೇಃ ಪುತ್ರಾ ರುಕ್ಮಿಣ್ಯಾಂ ಕಥಿತಾ ದ್ವಿಜಾಃ ।
ಭಾನ್ವಾದಿಕಾಂಶ್ಚ ವೈ ಪುತ್ರಾನ್ಸತ್ಯಭಾಮಾ ವ್ಯಜಾಯತ ॥ ೧ ॥

ದೀಪ್ತಿಮಂತಃ ಪ್ರಪಕ್ಷಾದ್ಯಾ ರೋಹಿಣ್ಯಾಸ್ತನಯಾ ಹರೇಃ ।
ಬಭೂವುರ್ಜಾಂಬವತ್ಯಾಶ್ಚ ಸಾಂಬಾದ್ಯಾ ಬಾಹುಶಾಲಿನಃ ॥ ೨ ॥

ತನಯಾ ಭದ್ರವಿಂದಾದ್ಯಾ ನಾಗ್ನಜಿತ್ಯಾಂ ಮಹಾಬಲಾಃ ।
ಸಂಗ್ರಾಮಜಿತ್ಪ್ರಧಾನಾಸ್ತು ಶೈಬ್ಯಾಯಾಂ ಚಾಭವನ್ಸುತಾಃ ॥ ೩ ॥

---

### ಇನ್ನೂರನಾಲ್ಕನೆಯ ಅಧ್ಯಾಯವು

೧. ಎಲೈ ಬ್ರಾಹ್ಮಣರಿರಾ, ಹಿಂದೆ ನಿಮಗೆ ಶ್ರೀಕೃಷ್ಣನಿಗೆ ರುಕ್ಮಿಣಿಯಲ್ಲಿ ಹುಟ್ಟಿದ ಪ್ರದ್ಯುಮ್ನ ಮೊದಲಾದ ಮಕ್ಕಳನ್ನು ತಿಳಿಸಿದೆನಲ್ಲವೇ? ಸತ್ಯಭಾಮೆಯಲ್ಲಿ ಭಾನುವೇ ಮೊದಲಾದ ಮಕ್ಕಳು ಜನಿಸಿದರು.

೨. ಅದೇ ರೀತಿ ರೋಹಿಣಿಯೆಂಬ ಮಹಿಷಿಯಲ್ಲಿ ಪ್ರಪಕ್ಷ ಮೊದಲಾದ ಮಹಾತೇಜಶ್ಶಾಲಿಗಳಾದ ಕುಮಾರರೂ, ಜಾಂಬುವತಿಯೆಂಬ ಮಡದಿಯಲ್ಲಿ ಪರಾಕ್ರಮಶಾಲಿಗಳಾದ ಸಾಂಬ ಮೊದಲಾದ ಪುತ್ರರೂ ಜನಿಸಿದರು.

೩. ಅದೇರೀತಿ ಮಹಾಬಲಿಷ್ಠರಾದ ಭದ್ರವಿಂದ ಮೊದಲಾದ ಮಕ್ಕಳು ನಾಗ್ನಜಿತಿಯಲ್ಲಿಯೂ ಸಂಗ್ರಾಮಜಿತ್ ಮೊದಲಾದವರು ಶೈಲ್ಯರಾಜಕುಮಾರಿಯಲ್ಲಿಯೂ ಜನಿಸಿದರು.

ವೃಕಾದ್ಯಾಸ್ತು ಸುತಾ ಮಾದ್ರೀ ಗಾತ್ರವತ್ಪ್ರಮುಖಾನ್ಸುತಾನ್ ।
ಅವಾಪ ಲಕ್ಷ್ಮಣಾ ಪುತ್ರಾನ್ಕಾಲಿಂದ್ಯಾಶ್ಚ ಶ್ರುತಾದಯಃ ॥ ೪ ॥

ಅನ್ಯಾಸಾಂ ಚೈವ ಭಾರ್ಯಾಣಾಂ ಸಮುತ್ಪನ್ನಾನಿ ಚಕ್ರಿಣಃ ।
ಅಷ್ಟಾಯುತಾನಿ ಪುತ್ರಾಣಾಂ ಸಹಸ್ರಾಣಿ ಶತಂ ತಥಾ ॥ ೫ ॥

ಪ್ರದ್ಯುಮ್ನಃ ಪ್ರಮುಖಸ್ತೇಷಾಂ ರುಕ್ಮಿಣ್ಯಾಸ್ತು ಸುತಸ್ತತಃ ।
ಪ್ರದ್ಯುಮ್ನಾದನಿರುದ್ಧೋಽಭೂದ್ವಜ್ರಸ್ತಸ್ಮಾದಜಾಯತ ॥ ೬ ॥

ಅನಿರುದ್ಧೋ ರಣೇ ರುದ್ಧೋ ಬಲೇಃ ಪೌತ್ರೀಂ ಮಹಾಬಲಃ ।
ಬಾಣಸ್ಯ ತನಯಾಮೂಷಾಮುಪಯೇಮೇ ದ್ವಿಜೋತ್ತಮಾಃ ॥ ೭ ॥

ಯತ್ರ ಯುದ್ಧಮಭೂದ್ಘೋರಂ ಹರಿಶಂಕರಯೋರ್ಮಹತ್ ।
ಛಿನ್ನಂ ಸಹಸ್ರಂ ಬಾಹೂನಾಂ ಯತ್ರ ಬಾಣಸ್ಯ ಚಕ್ರಿಣಾ ॥ ೮ ॥

---

೪. ಮತ್ತು ಮದ್ರರಾಜನ ಮಗಳಾದ ಸುಶೀಲೆಯಲ್ಲಿ ವೃಕ ಮುಂತಾದ ಸುತರೂ, ಲಕ್ಷ್ಮಣೆಯಲ್ಲಿ ಗಾತ್ರವಂತ ಮೊದಲಾದ ತನಯರೂ ಕಾಳಿಂದಿಯಲ್ಲಿ ಶ್ರುತ ಮುಂತಾದ ಕುಮಾರರೂ ಹುಟ್ಟಿದರು.

೫. ಇದಲ್ಲದೆ ಕೃಷ್ಣನಿಗೆ ತನ್ನ ಇತರ ಪತ್ನಿಯರಲ್ಲಿ ಎಂಟು ಅಯುತವೂ ಎಂಟು ಸಾವಿರವೂ ಎಂಟುನೂರೂ ಆದ (೮೮೮೦೦) (ಎಂಭತ್ತೆಂಟುಸಾವಿರದ ಎಂಟುನೂರು ಮಂದಿ) ಕುಮಾರರು ಸಂಭವಿಸಿದರು.

೬. ಈ ಕೃಷ್ಣನ ಕುಮಾರರಲ್ಲೆಲ್ಲಾ ರುಕ್ಮಿಣಿಯ ಮಗನಾದ ಪ್ರದ್ಯುಮ್ನನೇ ಪ್ರಮುಖನಾದವನು. ಅವನಿಗೆ ಅನಿರುದ್ಧನೂ ಆತನಿಗೆ ವಜ್ರನೆಂಬುವನೂ ಮಗನಾದನು.

೭. ಎಲೈ ಬ್ರಾಹ್ಮಣೋತ್ತಮರಿರಾ! ರಣರಂಗದಲ್ಲಿ ಯಾರಿಂದಲೂ ತಡೆಯಲ್ಪಡವಂತಹ ಪರಾಕ್ರಮಶಾಲಿಯಾದ ಅನಿರುದ್ಧನು ಬಲಿಯ ಮೊಮ್ಮಗಳೂ ಬಾಣಾಸುರನ ಮಗಳೂ ಆದ ಉಷೆಯನ್ನು ಮದುವೆಯಾದನು.

೮. ಆ ಸಂದರ್ಭದಲ್ಲೇ ಕೃಷ್ಣನಿಗೂ ಶಂಕರನಿಗೂ ಭಾರಿ ಯುದ್ಧವು ಜರುಗಿತು. ಆಗಲೇ ಶ್ರೀಕೃಷ್ಣನು ಬಾಣಾಸುರನ ಸಾವಿರ ತೋಳುಗಳನ್ನು ಕತ್ತರಿಸಿ ಬಿಟ್ಟನು ಎಂದು ವ್ಯಾಸನು ಹೇಳಲು,

॥ ಮುನಯ ಊಚುಃ ॥

ಕಥಂ ಯುದ್ಧಮಭೂದ್ಬ್ರಹ್ಮನ್ನುಷಾರ್ಥೇ ಹರಕೃಷ್ಣಯೋಃ ।
ಕಥಂ ಕ್ಷಯಂ ಚ ಬಾಣಸ್ಯ ಬಾಹೂನಾಂ ಕೃತವಾನ್ಹರಿಃ ॥ ೯ ॥

ಏತತ್ಸರ್ವಂ ಮಹಾಭಾಗ ವಕ್ತುಮರ್ಹಸಿ ನೋಽಖಿಲಂ ।
ಮಹತ್ಕೌತೂಹಲಂ ಜಾತಂ ಶ್ರೋತುಮೇತಾಂ ಕಥಾಂ ಶುಭಾಂ ॥ ೧೦ ॥

॥ ವ್ಯಾಸ ಉವಾಚ ॥

ಉಷಾ ಬಾಣಸುತಾ ವಿಪ್ರಾಃ ಪಾರ್ವತೀಂ ಶಂಭುನಾ ಸಹ ।
ಕ್ರೀಡಂತೀಮುಪಲಕ್ಷ್ಯೋಚ್ಚೈಃ ಸ್ಪೃಹಾಂ ಚಕ್ರೇ ತದಾ ಸ್ವಯಂ ।
ತತಃ ಸಕಲಚಿತ್ತಜ್ಞಾ ಗೌರೀ ತಾಮಾಹ ಭಾಮಿನೀಂ ॥ ೧೧ ॥

॥ ಗೌರ್ಯುವಾಚ ॥

ಅಲಮಿತ್ಯನುತಾಪೇನ ಭರ್ತ್ರಾ ತ್ವಮಪಿ ರಂಸ್ಯಸೇ ॥ ೧೨ ॥

---

೯-೧೦. ಆಗ ಮುನಿಗಳು ವ್ಯಾಸನನ್ನು ಕುರಿತು, ಓ ಬ್ರಹ್ಮಜ್ಞನೇ, ಉಷೆಯ ಸಲುವಾಗಿ ಕೃಷ್ಣನಿಗೂ ಶಂಕರನಿಗೂ ಕಾಳಗವೇಕೆ ಉಂಟಾಯಿತು? ಅದು ಹೇಗೆ ನಡೆಯಿತು? ಶ್ರೀಕೃಷ್ಣನು ಬಾಣನ ಬಾಹುಗಳನ್ನು ಕತ್ತರಿಸಿದುದರಾದರೂ ಹೇಗೆ? ಓ ಮಹಾತ್ಮ! ಇದೆಲ್ಲವನ್ನೂ ನಮಗೆ ನೀನು ತಿಳಿಸಬೇಕು. ಈ ಶುಭಕರವಾದ ಕಥೆಯನ್ನು ಕೇಳಲು ನಮಗೆ ತುಂಬಾ ಆಸೆಯಾಗಿರುವುದು ಎಂದು ಕೇಳಲು ವ್ಯಾಸನಿಂತೆಂದನು.

೧೧-೧೨. ಎಲೈ ಬ್ರಾಹ್ಮಣರಿರಾ, ಬಾಣನ ಮಗಳಾದ ಉಷೆಯು ಒಂದುದಿನ ಪಾರ್ವತಿಯು ಸರ್ವದಾ ಶಿವನೊಡನೆ ವಿಹರಿಸುತ್ತಿರುವಳೆಂಬುದನ್ನು ಮನಗಂಡು ತಾನೂ ಆರೀತಿ ಇರಬೇಕೆಂದು ಬಹುವಾಗಿ ಆಸೆಪಟ್ಟಳು. ಆಗ ಎಲ್ಲರ ಹೃದಯವನ್ನೂ ಬಲ್ಲ ಗೌರಿಯು ಅವಳನ್ನು ಕುರಿತು ಏಕೆ ಈರೀತಿ ಪರಿತಪಿಸುವೆ? ನೀನೂ ಸಹ ಇದೇರೀತಿ ನಿನ್ನ ಗಂಡನೊಡನೆ ವಿಹರಿಸುವೆ.

॥ ವ್ಯಾಸ ಉವಾಚ ॥

ಇತ್ಯುಕ್ತಾ ಸಾ ತದಾ ಚಕ್ರೇ ಕದೇತಿ ಮತಿಮಾತ್ಮನಃ ।
ಕೋ ವಾ ಭರ್ತಾ ಮಮೇತ್ಯೇನಾಂ ಪುನರಪ್ಯಾಹ ಪಾರ್ವತೀ ॥ ೧೩ ॥

॥ ಪಾರ್ವತ್ಯುವಾಚ ॥

ವೈಶಾಖೇ ಶುಕ್ಲದ್ವಾದಶ್ಯಾಂ ಸ್ವಪ್ನೇ ಯೋಽಭಿಭವಂ ತವ ।
ಕರಿಷ್ಯತಿ ಸ ತೇ ಭರ್ತಾ ರಾಜಪುತ್ರಿ ಭವಿಷ್ಯತಿ ॥ ೧೪ ॥

॥ ವ್ಯಾಸ ಉವಾಚ ॥

ತಸ್ಯಾಂ ತಿಥೌ ಪುಮಾನ್ಸ್ವಪ್ನೇ ಯಥಾ ದೇವ್ಯಾ ಉದೀರಿತಃ ।
ತಥೈವಾಭಿಭವಂ ಚಕ್ರೇ ರಾಗಂ ಚಕ್ರೇ ಚ ತತ್ರ ಸಾ ।
ತತಃ ಪ್ರಬುದ್ಧಾ ಪುರುಷಮಪಶ್ಯಂತೀ ತಮುತ್ಸುಕಾ ॥ ೧೫ ॥

॥ ಉಷೋವಾಚ ॥

ಕ್ವ ಗತೋಽಸೀತಿ ನಿರ್ಲಜ್ಜಾ ದ್ವಿಜಾಶ್ಚೋಕ್ತವತೀ ಸಖೀಂ ।
ಬಾಣಸ್ಯ ಮಂತ್ರೀ ಕುಂಭಾಂಡಶ್ಚಿತ್ರಲೇಖಾ ತು ತತ್ಸುತಾ ॥ ೧೬ ॥

---

೧೩-೧೪. ಎಂದು ಹೇಳಲು, ಉಷೆಯು ಹಾಗೆ ಆಗುವುದು ಯಾವಾಗ ? ನನ್ನ ಪ್ರಿಯನಾದರೂ ಯಾರು ? ಎಂದು ಪ್ರಶ್ನಿಸಿದಳು. ಆಗ ಪಾರ್ವತಿಯು ವೈಶಾಖ ಶುಕ್ಲ ದ್ವಾದಶೀದಿನ ರಾತ್ರಿಯಲ್ಲಿ ನಿನ್ನ ಸ್ವಪ್ನದಲ್ಲಿ ಯಾವ ಪುರುಷನು ನಿನ್ನನ್ನು ಉಪಭೋಗಿಸಿದಂತೆ ತೋರುವುದೋ ಅದೇ ಪುರುಷನೇ ನಿನ್ನ ಕೈಹಿಡಿಯುವನು ಎಂದು ತಿಳಿಸಿದಳು.

೧೫. ಎಲೈ ಮುನಿಗಳಿರಾ ! ಪಾರ್ವತೀದೇವಿಯು ಹೇಳಿದಂತೆ ಆ ತಿಥಿಯಲ್ಲಿ ಉಷೆಯು ಸ್ವಪ್ನದಲ್ಲಿ ಪುರುಷನೋರ್ವನು ಅವಳನ್ನು ಉಪಭೋಗಿಸಿದನು. ಆ ಪುರುಷನಲ್ಲಿಯೇ ಉಷೆಯು ಅನುರಾಗವನ್ನು ತಾಳಿದಳು. ಬಳಿಕ ಸ್ವಪ್ನದಿಂದ ಎಚ್ಚೆತ್ತು ಆ ಉಷೆಯು ತನ್ನ ಪ್ರಿಯನನ್ನು ಕಾಣದೆ ಕುತೂಹಲ ಪರವಶಳಾಗಿ.

೧೬-೧೮. ನಾಚಿಕೆಯನ್ನು ತೊರೆದು ಎಲ್ಲಿಹೋದೆ? ಎಲ್ಲಿ ಹೋದೇ ? ಎಂಬುದಾಗಿ ಪ್ರಿಯನ ಭ್ರಾಂತಿಯಿಂದ ತನ್ನ ಸಖಿಯನ್ನು ಕೇಳಿದಳು.

ತಸ್ಯಾಃ ಸಖ್ಯಭವತ್ಸಾ ಚ ಪ್ರಾಹ ಕೋಽಯಂ ತ್ವಯೋಚ್ಯತೇ ।
ಯದಾ ಲಜ್ಜಾಕುಲಾ ನಾಸ್ಯ ಕಥಯಾಮಾಸ ಸಾ ಸಖೀ ॥ ೧೭ ॥

ತದಾ ವಿಶ್ವಾಸಮಾನೀಯ ಸರ್ವಮೇವಾನ್ವವೇದಯತ್ ।
ವಿದಿತಾಯಾಂ ತು ತಾಮಾಹ ಪುನರೂಷಾ ಯಥೋದಿತಂ ।
ದೇವ್ಯಾ ತಥೈವ ತತ್ಪ್ರಾಪ್ತೌ ಯೋಽಭ್ಯುಪಾಯಃ ಕುರುಷ್ವ ತಂ ॥ ೧೮ ॥

॥ ವ್ಯಾಸ ಉವಾಚ ॥

ತತಃ ಪಟೇ ಸುರಾನ್ದೈತ್ಯಾನ್ಗನ್ಧರ್ವಾಂಶ್ಚ ಪ್ರಧಾನತಃ ।
ಮನುಷ್ಯಾಂಶ್ಚಾಭಿಲಿಖ್ಯಾಸೌ ಚಿತ್ರಲೇಖಾಪ್ಯದರ್ಶಯತ್ ॥ ೧೯ ॥

ಅಪಾಸ್ಯ ಸಾ ತು ಗಂಧರ್ವಾಂಸ್ತಥೋರಗಸುರಾಸುರಾನ್ ।
ಮನುಷ್ಯೇಷು ದದೌ ದೃಷ್ಟಿಂ ತೇಷ್ವಪ್ಯಂಧಕವೃಷ್ಣಿಷು ॥ ೨೦ ॥

---

ಆ ಸಖಿಯ ಹೆಸರು ಚಿತ್ರಲೇಖೆಯೆಂದು. ಅವಳು ಬಾಣನಮಗಳಾದ ಕುಂಭಾಂಡನ ಮಗಳು. ಉಷೆಯು ತನ್ನನ್ನೀರೀತಿ ಮಾತಾಡಿಸಿದುದನ್ನು ಕಂಡು ಚಿತ್ರಲೇಖೆಯು ಇದೇನು? ಯಾರನ್ನು ಮಾತನಾಡಿಸುವೆ? ಎಂದು ಕೇಳಲು, ಉಷೆಯು ನಾಚಿಕೆಯಿಂದ ಏನೂ ಹೇಳದೆ ಸುಮ್ಮನೆ ಇರುವುದನ್ನು ನೋಡಿ ಆ ಚಿತ್ರಲೇಖೆಯು ಅವಳಿಗೆ ನಂಬಿಕೆಯುನ್ನುಂಟುಮಾಡಿ ಅವಳಿಂದ ಎಲ್ಲ ಸಂಗತಿಯನ್ನೂ ತಿಳಿದುಕೊಂಡಳು. ಉಷೆಯು ಹಿಂದೆ ತನಗೆ ಪಾರ್ವತಿಯು ಹೇಳಿದಂತೆ ತನ್ನ ಪ್ರಿಯನಾದವನನ್ನು ಪಡೆಯಲು ಯಾವುದಾದರೂ ಉಪಾಯವನ್ನು ಮಾಡುವಂತೆ ಚಿತ್ರಲೇಖೆಯನ್ನು ಪ್ರಾರ್ಥಿಸಿದಳು.

೧೯. ಓ ಮುನಿಗಳಿರಾ! ಆ ಚಿತ್ರಲೇಖೆಯು, ದೇವತೆಗಳಲ್ಲಿಯೂ ದೈತ್ಯರಲ್ಲಿಯೂ, ಗಂಧರ್ವರಲ್ಲಿಯೂ, ಮನುಷ್ಯರಲ್ಲಿಯೂ ಮುಖ್ಯಮುಖ್ಯರಾದವರನ್ನು ಚಿತ್ರದಲ್ಲಿ ಬರೆದು ಉಷೆಗೆ ತೋರಿಸಿದಳು.

೨೦. ಆಗಲಾ ಉಷೆಯು, ಗಂಧರ್ವರನ್ನೂ, ನಾಗರನ್ನೂ ಸುರರನ್ನೂ ಅಸುರರನ್ನೂ ಒಕ್ಕಡೆ ನೂಕಿ, ಮನುಷ್ಯರ ಕಡೆ ತನ್ನ ದೃಷಿಯನ್ನು ಇಟ್ಟಳು. ಅದರಲ್ಲಿಯೂ ಅಂಧಕ, ವೃಷ್ಣಿ ವಂಶದ ಪ್ರಧಾನರಲ್ಲಿ ತನ್ನ ದೃಷ್ಟಿಯನ್ನು ನೆಲಸಿದಳು.

ಕೃಷ್ಣರಾಮೌ ವಿಲೋಕ್ಯಾಸೀತ್ಸುಭ್ರೂರ್ಲಜ್ಜಾಯುತೇಕ್ಷಣಾ ।
ಪ್ರದ್ಯುಮ್ನದರ್ಶನೇ ವ್ರೀಡಾದೃಷ್ಟಿಂ ನಿನ್ಯೇ ತತೋ ದ್ವಿಜಾಃ ॥ ೨೧ ॥

ದೃಷ್ಟ್ವಾನಿರುದ್ಧಂ ಚ ತತೋ ಲಜ್ಜಾ ಕ್ವಾಪಿ ನಿರಾಕೃತಾ ।
ಸೋಽಯಂ ಸೋಽಯಂ ಮನೋತ್ಯುಕ್ತೇ ತಯಾ ಸಾ ಯೋಗಗಾಮಿನೀ ।
ಯಯೌ ದ್ವಾರವತೀಮೂಷಾಂ ಸಮಾಶ್ವಾಸ್ಯ ತತಃ ಸಖೀ ॥ ೨೨ ॥

ಇತಿ ಶ್ರೀಮಹಾಪುರಾಣೇ ಆದಿಬ್ರಾಹ್ಮೇ ಬಾಣಯುದ್ಧೇ
ಪಂಚಾಧಿಕದ್ವಿಶತತಮೋಽಧ್ಯಾಯಃ

---

೨೧. ಎಲೈ ದ್ವಿಜರೇ! ಸುಭ್ರುವು ಆ ವಂಶದ ಪ್ರಧಾನರ ನಡುವೆ ಕೃಷ್ಣ ಬಲರಾಮರನ್ನು ಕಂಡು ಲಜ್ಜೆಯಿಂದ ಕಣ್ಣನ್ನು ತಿರುಗಿಸಿದಳು. ಬಳಿಕ ಪ್ರದ್ಯುಮ್ನನನ್ನು ಕಂಡಾಗಲಂತೂ ತನ್ನ ನಾಚಿಕೆಯು ನೋಟವನ್ನೇ ಬೀರಿದಳು.

೨೨. ಆದರೆ ಅನಿರುದ್ಧನನ್ನು ಕಂಡಾಗ ಮಾತ್ರ ಅವಳ ಲಜ್ಜೆಯೆಲ್ಲವೂ ಎಲ್ಲಿಯೋ ಓಡಿಹೋಯಿತು. ಆಗವಳು ಇದೋ ಇವನೇ ನನ್ನ ಪ್ರಿಯನೆಂದು ಹೇಳಿದಳು. ಅವಳ ಸಖಿಯಾದ ಚಿತ್ರಲೇಖೆಯು ಉಷೆಯನ್ನು ಸಮಾಧಾನಪಡಿಸಿ ಯೋಗಬಲದಿಂದ ದ್ವಾರಕಿಗೆ ಹೋದಳು.

ಇಲ್ಲಿಗೆ ಶ್ರೀ ಬ್ರಹ್ಮಪುರಾಣದಲ್ಲಿ ಉಷೆ ಮತು ಚಿತ್ರಲೇಖೆಯರ ಸಂವಾದವರ್ಣನವೆಂಬ ಇನ್ನೂರೈದನೆಯ ಅಧ್ಯಾಯವು ಮುಗಿದುದು.



श्रीः

ಓಂ ತತ್ಸದ್ಬ್ರಹ್ಮಣೇನಮಃ

# ಅಥ ಮಹಾಪುರಾಣೇ ಬ್ರಾಹ್ಮೇ

## ಷಡಧಿಕದ್ವಿಶತತಮೋಽಧ್ಯಾಯಃ

—o—

॥ ವ್ಯಾಸ ಉವಾಚ ॥

ಬಾಣೋಽಪಿ ಪ್ರಣಿಪತ್ಯಾಗ್ರೇ ತತಸ್ತ್ವಾಹ ತ್ರಿಲೋಚನಂ ॥ ೧ ॥

॥ ಬಾಣ ಉವಾಚ ॥

ದೇವ ಬಾಹುಸಹಸ್ರೇಣ ನಿರ್ವಿಣ್ಣೋಽಹಂ ವಿನಾಹವಂ ।
ಕಚ್ಚಿನ್ಮನ್ಯೇಷಾಂ ಬಾಹೂನಾಂ ಸಾಫಲ್ಯಕರಣೋ ರಣಃ ।
ಭವಿಷ್ಯತಿ ವಿನಾ ಯುದ್ಧಂ ಭಾರಾಯ ಮಮ ಕಿಂ ಭುಜೈಃ ॥ ೨ ॥

॥ ಶಂಕರ ಉವಾಚ ॥

ಮಯೂರಧ್ವಜಭಂಗಸ್ತೇ ಯದಾ ಬಾಣ ಭವಿಷ್ಯತಿ ।
ಪಿಶಿತಾಶಿಜನಾನಂದಂ ಪ್ರಾಪ್ಸ್ಯಸಿ ತ್ವಂ ತದಾ ರಣಂ ॥ ೩ ॥

---

### ಇನ್ನೂರಾರನೆಯ ಅಧ್ಯಾಯವು

೧-೨. ಓ ಮುನಿಗಳಿರಾ! ಈನಡುವೆ ಒಂದುದಿನ ಬಾಣನು ಶಿವನಿಗೆ ನಮಸ್ಕರಿಸಿ ಓ ದೇವ! ಯುದ್ಧವಾವುದೂ ಇಲ್ಲದೇ ಇರುವುದರಿಂದ ಈ ಸಾವಿರ ತೋಳುಗಳನ್ನು ಪಡೆದ ನನಗೆ ಬಹು ಬೇಸರವಾಗಿರುವುದು. ಈ ತೋಳುಗಳನ್ನು ಸಫಲಮಾಡದಂತಹ ಯುದ್ಧವು ಮುಂದೆ ಜರುಗುವುದಾದರೂ ಉಂಟೆ? ಯುದ್ಧವಿಲ್ಲದೆ ಸುಮ್ಮನೆ ಹೊರೆಯಾಗಿ ಉಳಿದ ಈ ತೋಳುಗಳಿದ್ದೇನು ಫಲ ಎಂದು ಪ್ರಾರ್ಥಿಸಿದನು.

೩. ಶಂಕರನು ಬಾಣನನ್ನು ಕುರಿತು ನಿನ್ನ ಲಾಂಛನವಾದ ಮಯೂರಧ್ವಜವು ಯಾವದಿನ ಮುರಿದು ಬೀಳುವುದೋ ಆದಿವಸವೇ ರಾಕ್ಷಸವರ್ಗಕ್ಕೆ ಆನಂದದಾಯಕವಾದ ಯುದ್ಧವನ್ನು ನೀನು ಹೊಂದುವೆ ಎಂದನು.

॥ ವ್ಯಾಸ ಉವಾಚ ॥

ತತಃ ಪ್ರಣಮ್ಯ ಮುದಿತಃ ಶಂಭುಮಭ್ಯಾಗತೋ ಗೃಹಾತ್ ।
ಭಗ್ನಂ ಧ್ವಜಮಥಾಲೋಕ್ಯ ಹೃಷ್ಟೋ ಹರ್ಷಂ ಪರಂ ಯಯೌ ॥ ೪ ॥

ಏತಸ್ಮಿನ್ನೇವ ಕಾಲೇ ತು ಯೋಗವಿದ್ಯಾಬಲೇನ ತಂ ।
ಅನಿರುದ್ಧಮಥಾನಿನ್ಯೇ ಚಿತ್ರಲೇಖಾ ವರಾ ಸಖೀ ॥ ೫ ॥

ಕನ್ಯಾಂತಃಪುರಮಧ್ಯೇ ತಂ ರಮಮಾಣಂ ಸಹೋಷಯಾ ।
ವಿಜ್ಞಾಯ ರಕ್ಷಿಣೋ ಗತ್ವಾ ಶಶಂಸುರ್ದೈತ್ಯಭೂಪತೇಃ ॥ ೬ ॥

ವ್ಯಾದಿಷ್ಟಂ ಕಿಂಕರಾಣಾಂ ತು ಸೈನ್ಯಂ ತೇನ ಮಹಾತ್ಮನಾ ।
ಜಘಾನ ಪರಿಘಂ ಲೌಹಮಾದಾಯ ಪರವೀರಹಾ ॥ ೭ ॥

---

೪. ಅದನ್ನು ಕೇಳಿ ಸಂತೋಷದಿಂದ ಬಾಣನು ಶಿವನನ್ನು ನಮಸ್ಕರಿಸಿ ಮನೆಗೆ ಬಂದಾಗ ತನ್ನ ಧ್ವಜವು ಮನೆಗೆ ತಗುಲಿ ಮುರಿದುದನ್ನು ಕಂಡು ಮಿತಿ ಮೀರಿ ಸಂತೋಷವನ್ನು ತಾಳಿದನು.

೫. ಈ ಸಮಯಕ್ಕೆ ಸರಿಯಾಗಿ ಉಷೆಯ ಆಪ್ತಸಖಿಯಾದ ಚಿತ್ರ ಲೇಖೆಯು ತನ್ನ ಯೋಗವಿದ್ಯೆಯ ಬಲದಿಂದ ಅನಿರುದ್ಧನನ್ನು ಉಷೆಯ ಅಂತಃ ಪುರಕ್ಕೆ ಕರೆತಂದಳು.

೬. ಅನಂತರ ಅಲ್ಲಿ ಕಾವಲಿದ್ದ ಭಟರು ಉಷೆಯೊಡನೆ ವಿಹರಿಸುತ್ತಿದ್ದ ಅನಿರುದ್ಧಕುಮಾರನ ವಿಷಯವನ್ನು ದೈತ್ಯಚಕ್ರವರ್ತಿಯಾದ ಬಾಣನಿಗೆ ಆ ಸಂಗತಿಯನ್ನು ತಿಳಿಸಿದರು.

೭. ಆಗ ಬಾಣನು ತನ್ನ ಸೇವೆಗಾಗಿ ಸಿದ್ಧರಾಗಿದ್ದ ಸೈನ್ಯಕ್ಕೆ ಅನಿರುದ್ಧನ ಮೇಲೆ ಹೋರಾಡುವಂತೆ ಅಪ್ಪಣೆಮಾಡಿ ಕಳುಹಿಸಿದನು. ಶತ್ರುಸಂಹಾರಿ ಯಾದ ಅನಿರುದ್ಧನು ಅಲ್ಲಿದ್ದ ಕಬ್ಬಿಣದ ಪರಿಘವನ್ನು ತೆಗೆದುಕೊಂಡು ಅವರೆಲ್ಲ ರನ್ನೂ ಸದೆಬಡಿದನು.

ಹತೇಷು ತೇಷು ಬಾಣೋಽಪಿ ರಥಸ್ಥಸ್ತದ್ವಧೋದ್ಯತಃ ।
ಯುಧ್ಯಮಾನೋ ಯಥಾಶಕ್ತಿ ಯದಾ ವೀರೇಣ ನಿರ್ಜಿತಃ ॥ ೮ ॥

ಮಾಯಯಾ ಯುಯುಧೇ ತೇನ ಸ ತದಾ ಮಂತ್ರಚೋದಿತಃ ।
ತತಶ್ಚ ಪನ್ನಗಾಸ್ತ್ರೇಣ ಬಬಂಧ ಯದುನಂದನಂ ॥ ೯ ॥

ದ್ವಾರವತ್ಯಾಂ ಕ್ವ ಯಾತೋಽಸಾವನಿರುದ್ಧೇತಿ ಜಲ್ಪತಾಂ ।
ಯದೂನಾಮಾಚಚಕ್ಷೇ ತಂ ಬದ್ಧಂ ಬಾಣೇನ ನಾರದಃ ॥ ೧೦ ॥

ತಂ ಶೋಣಿತಪುರೇ ಶ್ರುತ್ವಾ ನೀತಂ ವಿದ್ಯಾವಿದಗ್ಧಯಾ ।
ಯೋಷಿತಾ ಪ್ರತ್ಯಯಂ ಜಗ್ಮುರ್ಯಾದವಾ ನಾಮ ವೈರಿತಿ ॥ ೧೧ ॥

---

೮-೯. ಅನಂತರ ತಾನು ಕಳುಹಿಸಿದ ಸೇನೆಯೆಲ್ಲವೂ ಸತ್ತುದುದನ್ನು ಕೇಳಿ ಅನಿರುದ್ಧನನ್ನು ಕೊಲ್ಲಬೇಕೆಂದೆಣಿಸಿ ಬಾಣನು ರಥವನ್ನೇರಿ ತನ್ನ ಶಕ್ತಿಯೆಲ್ಲವನ್ನೂ ಬಿಟ್ಟು ಅವನೊಡನೆ ಹೋರಾಡಿದನು. ಆದರೆ ಆ ವೀರನಿಂದ ಬಾಣನು ಸೋಲಲೇಬೇಕಾಯಿತು. ಆಗ ಅವನು ಮಂತ್ರಾಲೋಚನೆಮಾಡಿ ಮಾಯೆಯಿಂದಲೇ ಗೆಲ್ಲಬೇಕೆಂದು ನಿರ್ಧರಿಸಿ ಮಾಯಾಯುದ್ಧವನ್ನು ನಡೆಸುತ್ತಾ, ಯದುಕುಮಾರನಾದ ಅನಿರುದ್ಧನನ್ನು ಪನ್ನಗಾಸ್ತ್ರದಿಂದ (ಸರ್ಪಾಸ್ತ್ರ) ಬಂಧಿಸಿಬಿಟ್ಟನು.

೧೦. ಇತ್ತಲಾ ದ್ವಾರಕೆಯಲ್ಲಿ ಅನಿರುದ್ಧನು ಎಲ್ಲಿಹೋದನೆಂಬುದಾಗಿ ಕೂಗುತ್ತಾ ಯದುಗಳೆಲ್ಲರೂ ಹುಡುಕುತ್ತಿರುವುದನ್ನು ಕಂಡು ನಾರದನು ಅವರಿಗೆ ಬಾಣಾಸುರನು ಅನಿರುದ್ಧನನ್ನು ಕಟ್ಟಿಹಾಕಿರುವ ಸಂಗತಿಯನ್ನು ತಿಳಿಸಿದನು.

೧೧. ಯೋಗವಿದ್ಯೆಯಲ್ಲಿ ನುರಿತವಳಾದ ಹೆಂಗಸೊಬ್ಬಳು ಅನಿರುದ್ಧನನ್ನು ಶೋಣಿತಪುರಕ್ಕೆ ಕೊಂಡೊಯ್ದ ಸಮಾಚಾರವನ್ನು ಕೇಳಿದ ಬಳಿಕ ಯಾದವರು ತಮಗೆ ವೈರಿಯೊಬ್ಬನಿರುವನೆಂಬುದಾಗಿ ನಂಬಿದರು.

ತತೋ ಗರುಡಮಾರುಹ್ಯ ಸ್ಮೃತಮಾತ್ರಾ ಗತಂ ಹರಿಃ ।
ಬಲಪ್ರದ್ಯುಮ್ನಸಹಿತೋ ಬಾಣಸ್ಯ ಪ್ರಯಯೌ ಪುರಂ ॥ ೧೨ ॥

ಪುರೀಪ್ರವೇಶೇ ಪ್ರಮಥೈರ್ಯುದ್ಧಮಾಸೀನ್ಮಹಾಬಲೈಃ ।
ಯಯೌ ಬಾಣಪುರಾಭ್ಯಾಶಂ ನೀತ್ವಾ ತಾನ್ಸಂಕ್ಷಯಂ ಹರಿಃ ॥ ೧೩ ॥

ತತಸ್ತ್ರಿಪಾದಸ್ತ್ರಿಶಿರಾ ಜ್ವರೋ ಮಾಹೇಶ್ವರೋ ಮಹಾನ್ ।
ಬಾಣರಕ್ಷಾರ್ಥಮತ್ಯರ್ಥಂ ಯುಯುಧೇ ಶಾರ್ಙ್ಗಧನ್ವನಾ ॥ ೧೪ ॥

ತದ್ಭಸ್ಮಸ್ಪರ್ಶಸಂಭೂತತಾಪಂ ಕೃಷ್ಣಾಂಗಸಂಗಮಾತ್ ।
ಅವಾಪ ಬಲದೇವೋಽಪಿ ಸಮಂ ಸಂಮೀಲಿತೇಕ್ಷಣಃ ॥ ೧೫ ॥

---

೧೨. ಆಗ ಶ್ರೀಕೃಷ್ಣನು ಸ್ಮರಿಸಿದೊಡನೆಯೇ ಬಳಿಯಲ್ಲಿ ಬಂದುನಿಂತ ಗರುಡನನ್ನೇರಿ ಬಲದೇವ ಪ್ರದ್ಯುಮ್ನರೊಡನೆ ಬಾಣನ ಊರಾದ ಶೋಣಿತ ಪುರಕ್ಕೆ ಹೊರಟನು.

೧೩. ಆ ಊರಿಗೆ ತಲುಪುವುದಕ್ಕೆ ಮುಂಚೆ ಮಹಾಬಲಾಢ್ಯರಾದ ಪ್ರಮಥರೊಡನೆ ಅವನು ಹೋರಾಡಬೇಕಾಯಿತು. ಅನಂತರ ಶ್ರೀಕೃಷ್ಣನು ಅವರೆಲ್ಲರನ್ನೂ ಕೊಂದು ಬಾಣನ ಪುರದ ಬಳಿಯನ್ನು ಸೇರಿದನು.

೧೪. ಆಗ ಆ ಊರಿನ ಬಾಗಿಲಿನಲ್ಲಿ ಬಾಣನ ಸಂರಕ್ಷಣೆಗಾಗಿ, ಮೂರು ಕಾಲು, ಮೂರು ತಲೆಗಳಿಂದ ಕೂಡಿದ ಮಾಹೇಶ್ವರನ ಜ್ವರವೆಂಬುದು ಶ್ರೀಕೃಷ್ಣನೊಡನೆ ಹೋರಾಡಿತು.

೧೫. ಆ ಮಹೇಶ್ವರಜ್ವರದ ಭಸ್ಮವು ತಗುಲಿದೊಡನೆಯೇ ಎಂತಹ ವೇದನೆಯುಂಟಾಗುವುದೆಂಬುದನ್ನು ಕೃಷ್ಣನ ಅಂಗವನ್ನು ಆಕಸ್ಮಿಕವಾಗಿ ಸಂಸ್ಪರ್ಶಿದ ಬಲರಾಮನೂ ಸಹ ಕಣ್ಣುಗಳನ್ನು ಮುಚ್ಚಿಕೊಂಡು ಅನುಭವಿಸಿದನು.

ತತಃ ಸಂಯುಧ್ಯಮಾನಸ್ತು ಸಹ ದೇವೇನ ಶಾರ್ಙ್ಗಿಣಾ ।
ವೈಷ್ಣವೇನ ಜ್ವರೇಣಾಶು ಕೃಷ್ಣದೇಹಾನ್ನಿರಾಕೃತಃ ॥ ೧೬ ॥

ನಾರಾಯಣಭುಜಾಘಾತಪರಿಪರಿಪೀಡನವಿಹ್ವಲಂ ।
ತಂ ವೀಕ್ಷ್ಯ ಕ್ಷಮ್ಯತಾಮಸ್ಯೇತ್ಯಾಹ ದೇವಃ ಪಿತಾಮಹಃ ॥ ೧೭ ॥

ತತಶ್ಚ ಕ್ಷಾಂತಮೇವೇತಿ ಪ್ರೋಚ್ಯ ತಂ ವೈಷ್ಣವಂ ಜ್ವರಂ ।
ಆತ್ಮನ್ಯೇವ ಲಯಂ ನಿನ್ಯೇ ಭಗವಾನ್ಮಧುಸೂದನಃ ॥ ೧೮ ॥

ಮಮ ತ್ವಯಾ ಸಮಂ ಯುದ್ಧಂ ಯೇ ಸ್ಮರಿಷ್ಯಂತಿ ಮಾನವಾಃ ।
ವಿಜ್ವರಾಸ್ತೇ ಭವಿಷ್ಯಂತೀತ್ಯುಕ್ತ್ವಾ ಚೈನಂ ಯಯೌ ಹರಿಃ ॥ ೧೯ ॥

ತತೋಽಗ್ನೀನ್ಭಗವಾನ್ಪಂಚ ಜಿತ್ವಾ ನೀತ್ವಾ ಕ್ಷಯಂ ತಥಾ ।
ದಾನವಾನಾಂ ಬಲಂ ವಿಷ್ಣುಶ್ಚೂರ್ಣಯಾಮಾಸ ಲೀಲಯಾ ॥ ೨೦ ॥

---

೧೬. ಆಗ ಶ್ರೀಕೃಷ್ಣನು (ಆ ಮಾಹೇಶ್ವರಜ್ವರವನ್ನು ನಿವಾರಿಸಲು) ತನ್ನ ದೇಹದಲ್ಲಿ ವೈಷ್ಣವಜ್ವರವನ್ನು ಸೃಷ್ಟಿಸಿ, ಅದರಿಂದ ಹೋರಾಡುತ್ತಿದ್ದ ಮಾಹೇಶ್ವರಜ್ವರವನ್ನು ಅಡಗಿಸಿಬಿಟ್ಟನು.

೧೭-೧೮. ಆಗ ನಾರಾಯಣನ (ಕೃಷ್ಣನ) ಬಾಹುಗಳ ಹೊಡೆತದಿಂದ ಪೀಡಿಸಲ್ಪಟ್ಟು ತತ್ತಳಿಸುತ್ತಿದ್ದ ಮಾಹೇಶ್ವರಜ್ವರವನ್ನು ಕಂಡು ಪಿತಾಮಹನು (ಬ್ರಹ್ಮನು) ಕ್ಷಮೆಯನ್ನು ತೋರು ಎಂಬುದಾಗಿ ಕೇಳಿಕೊಂಡನು. ಆಗ ಭಗವಂತನಾದ ಶ್ರೀಕೃಷ್ಣನು ಹಾಗೆಯೇ ಆಗಲಿ ಕ್ಷಮಿಸಿರುವೆನೆಂದು ಹೇಳಿ ತಾನು ಸೃಷ್ಟಿಸಿದ ವೈಷ್ಣವ ಜ್ವರವನ್ನು ತನ್ನಲ್ಲಿಯೇ ಅಡಗಿಸಿಕೊಂಡನು.

೧೯. ಅನಂತರ ಆ ಹರಿಯು ಯಾವ ಮಾನವರು ನನಗೂ ನಿನಗೂ ನಡೆದ ಈ ಯುದ್ಧವನ್ನು ಸ್ಮರಣೆಮಾಡುವರೋ ಅವರಿಗೆ ಯಾವ ರೋಗವೂ ಕೂಡ ಪೀಡಿಸದೆ ಬಿಟ್ಟುಹೋಗುವುದೆಂದು ಮಾಹೇಶ್ವರಜ್ವರಕ್ಕೆ ವರವಿತ್ತು ಮುಂದೆ ಸಾಗಿದನು.

೨೦. ಬಳಿಕ ಭಗವಂತನು ದಾರಿಯಲ್ಲಿ ಅಡ್ಡಬಂದ ಐದು ಅಗ್ನಿಗಳನ್ನು ಲೀಲಾಮಾತ್ರದಿಂದ ಅಡಗಿಸಿದುದಲ್ಲದೆ, ದಾನವರ ಸೈನ್ಯವನ್ನೂ ಲೀಲಾಜಾಲವಾಗಿ ಧೂಳೀಪಟಮಾಡಿಬಿಟ್ಟನು. (ಹುಡಿಹುಡಿ ಮಾಡಿದನು).

ತತಃ ಸಮಸ್ತಸೈನ್ಯೇನ ದೈತೇಯಾನಾಂ ಬಲೇಃ ಸುತಃ ।
ಯುಯುಧೇ ಶಂಕರಶ್ಚೈವ ಕಾರ್ತಿಕೇಯಶ್ಚ ಶೌರಿಣಾ ॥ ೨೧ ॥

ಹರಿಶಂಕರಯೋರ್ಯುದ್ಧಮತೀವಾಸೀತ್ಸುದಾರುಣಂ ।
ಚುಕ್ಷುಭುಃ ಸಕಲಾ ಲೋಕಾಃ ಶಸ್ತ್ರಾಸ್ತ್ರೈರ್ಬಹುಧಾರ್ದಿತಾಃ ॥ ೨೨ ॥

ಪ್ರಲಯೋಽಯಮಶೇಷಸ್ಯ ಜಗತೋ ನೂನಮಾಗತಃ ।
ಮೇನಿರೇ ತ್ರಿದಶಾ ಯತ್ರ ವರ್ತಮಾನೇ ಮಹಾಹವೇ ॥ ೨೩ ॥

ಜೃಂಭಣಾಸ್ತ್ರೇಣ ಗೋವಿಂದೋ ಜೃಂಭಯಾಮಾಸ ಶಂಕರಂ ।
ತತಃ ಪ್ರಣೇಶುರ್ದೈತೇಯಾಃ ಪ್ರಮಥಾಶ್ಚ ಸಮಂತತಃ ॥ ೨೪ ॥

ಜೃಂಭಾಭಿಭೂತಶ್ಚ ಹರೋ ರಥೋಪಸ್ಥಮುಪಾವಿಶತ್ ।
ನ ಶಶಾಕ ತದಾ ಯೋದ್ಧುಂ ಕೃಷ್ಣೇನಾಕ್ಲಿಷ್ಟಕರ್ಮಣಾ ॥ ೨೫ ॥

---

೨೧. ಆಗ ಬಾಣಾಸುರನು ದೈತ್ಯರ ಸೇನೆಯೆಲ್ಲವನ್ನೂ ಕೂಡಿಕೊಂಡು ಕೃಷ್ಣನೊಡನೆ ಹೋರಾಡತೊಡಗಿದನು. ಬಾಣನಿಗೆ ನೆರವಾಗಿ ಶಂಕರನೂ ಷಣ್ಮುಖನೂ ಯುದ್ಧಕ್ಕೆ ಬಂದರು.

೨೨. ಆ ಸಮಯದಲ್ಲಿ ಕೃಷ್ಣನಿಗೂ ಶಂಕರನಿಗೂ ಬಹು ಭಯಂಕರವಾದ ಯುದ್ಧವು ಜರುಗಿತು. ಅವರು ಬಿಡುತ್ತಿದ್ದ ಶಸ್ತ್ರಗಳಿಂದಲೂ ಅಸ್ತ್ರಗಳಿಂದಲೂ ಪೀಡಿತರಾಗಿ ಎಲ್ಲ ಲೋಕಗಳೂ ಬಹುವಾಗಿ ಕಳವಳಗೊಂಡವು.

೨೩. ಆ ಭಾರಿಯುದ್ಧವು ನಡೆಯುತ್ತಿರುವುದನ್ನು ಕಂಡು ದೇವತೆಗಳೆಲ್ಲರೂ ಸಕಲ ಪ್ರಪಂಚಕ್ಕೂ ಖಂಡಿತವಾಗಿ ವಿನಾಶಕಾಲವೊದಗಿತು ಎಂದು ಭಾವಿಸಿದರು.

೨೪. ಆಗ ಜೃಂಭಣಾಸ್ತ್ರದಿಂದ ಕೃಷ್ಣನು ಶಂಕರನನ್ನು ಮೋಹಗೊಳಿಸಿದನು. ಆಗ ದೈತ್ಯರೂ ಪ್ರಮಥರೂ ಒಟ್ಟೊಟ್ಟಿಗೆ ನಾಶವಾಗತೊಡಗಿದರು.

೨೫. ಆ ಅಸ್ತ್ರದ ಮಹಿಮೆಯಿಂದ ಪರಾಭವಹೊಂದಿದ ಶಂಕರನು ಲೀಲಾಯುದ್ಧವಿಶಾರದನಾದ ಕೃಷ್ಣನೊಂದಿಗೆ ಹೋರಾಡಲಾರದೆ ರಥದಲ್ಲಿ ಸುಮ್ಮನೆ ಕುಳಿತುಬಿಟ್ಟನು.

ಗರುಡಕ್ಷತಬಾಹುಶ್ಚ ಪ್ರದ್ಯುಮ್ನಾಸ್ತ್ರೇಣ ಪೀಡಿತಃ ।
ಕೃಷ್ಣಹುಂಕಾರನಿರ್ಧೂತಶಕ್ತಿಶ್ಚಾಪಯಯೌ ಗುಹಃ ॥ ೨೬ ॥

ಜೃಂಭಿತೇ ಶಂಕರೇ ನಷ್ಟೇ ದೈತ್ಯಸೈನ್ಯೇ ಗುಹೇ ಜಿತೇ ।
ನೀತೇ ಪ್ರಮಥಸೈನ್ಯೇ ಚ ಸಂಕ್ಷಯಂ ಶಾರ್ಙ್ಗಧನ್ವನಾ ॥ ೨೭ ॥

ನಂದೀಶಸಂಗೃಹೀತಾಶ್ವಮಧಿರೂಢೋ ಮಹಾರಥಂ ।
ಬಾಣಸ್ತತ್ರಾಯಯೌ ಯೋದ್ಧುಂ ಕೃಷ್ಣಕಾರ್ಷ್ಣಬಲೈಃ ಸಹ ॥ ೨೮ ॥

ಬಲಭದ್ರೋ ಮಹಾವೀರ್ಯೋ ಬಾಣಸೈನ್ಯಮನೇಕಧಾ ।
ವಿವ್ಯಾಧ ಬಾಣೈಃ ಪ್ರದ್ಯುಮ್ನೋ ಧರ್ಮತಶ್ಚಾಪಲಾಯತಃ ॥ ೨೯ ॥

---

೨೬. ಆಗ ಪ್ರದ್ಯುಮ್ನನು ಸ್ಕಂದನಮೇಲೆ ತನ್ನ ಅಸ್ತ್ರಗಳನ್ನು ಪ್ರಯೋಗಿಸಿದನು. ಗರುಡನು ಆತನ ಬಾಹುಗಳನ್ನು ಕೊಕ್ಕಿನಿಂದ ಕುಕ್ಕಿ ಗಾಯ ಮಾಡಿದನು. ಆ ಕುಮಾರನು ಬಿಟ್ಟ ಶಕ್ತಿಯನ್ನು ಕೃಷ್ಣನು ಹುಂಕಾರಮಾತ್ರದಿಂದಲೇ ನೆಲದಮೇಲೆ ಕೆಡವಿಬಿಟ್ಟನು. ಹೀಗಾಗಿ ಕುಮಾರನು ಪರಾಜಿತನಾಗಿ ಯುದ್ಧದಿಂದ ಹಿಮ್ಮೆಟ್ಟಿದನು.

೨೭-೨೮. ಈರೀತಿ ಕೃಷ್ಣನ ಅಸ್ತ್ರಮಹಿಮೆಯಿಂದ ಶಂಕರನು ಮಂಕಾಗಿ ಕುಳಿತುದನ್ನೂ, ದೈತ್ಯಸೈನ್ಯವು ಹಾಳಾದುದನ್ನೂ, ಸ್ಕಂದನು ಸೋತೋಡಿದುದನ್ನೂ, ಪ್ರಮಥಸೈನ್ಯವು ನಿರ್ನಾಮವಾದುದನ್ನೂ ಕಂಡು ಬಾಣಾಸುರನು ನಂದಿಯುಸಾರಥಿಯಾಗಿ ಕುದುರೆಗಗಳನ್ನು ನಡೆಸುತ್ತಿದ್ದ ಭಾರಿರಥವನ್ನೇರಿ ಬಂದು ಕೃಷ್ಣ ಮತ್ತು ಅವನ ಸೇನೆಯೊಂದಿಗೆ ಹೋರಾಡತೊಡಗಿದನು.

೨೯. ಆಗ ಬಲರಾಮನೂ, ಪ್ರದ್ಯುಮ್ನನೂ ಯುದ್ಧೋತ್ಸಾಹದಿಂದ ಕೂಡಿ ಆ ಬಾಣಾಸುರನ ಸೈನ್ಯದ ಮೇಲೆ ಬಾಣವರ್ಷವನ್ನು ಕರೆಯುತ್ತಾ ಧರ್ಮವನ್ನೂ, ವಿಚಾರದೆ ಅನೇಕ ರೀತಿಯಲ್ಲಿ ಗಾಯಗೊಳಿಸಿದರು.

ಆಕೃಷ್ಯ ಲಾಂಗಲಾಗ್ರೇಣ ಮುಶಲೇನ ಚ ಪ್ರೋಥಿತಂ ।
ಬಲಂ ಬಲೇನ ದದೃಶೇ ಬಾಣೋ ಬಾಣೈಶ್ಚ ಚಕ್ರಿಣಃ ॥ ೩೦ ॥

ತತಃ ಕೃಷ್ಣಸ್ಯ ಬಾಣೇನ ಯುದ್ಧಮಾಸೀತ್ಸಮಾಸತಃ ।
ಪರಸ್ಪರಂ ತು ಸಂದೀಪ್ತಾನ್ಕಾಯತ್ರಾಣವಿಭೇದಿನಃ ॥ ೩೧ ॥

ಕೃಷ್ಣಶ್ಚಿಚ್ಛೇದ ಬಾಣಾಂಸ್ತಾನ್ಬಾಣೇನ ಪ್ರಹಿತಾನ್ ಶರೈಃ ।
ಬಿಭೇದ ಕೇಶವಂ ಬಾಣೋ ಬಾಣಂ ವಿವ್ಯಾಧ ಚಕ್ರಧೃಕ್ ॥ ೩೨ ॥

ಮುಮುಚಾತೇ ತಥಾಸ್ತ್ರಾಣಿ ಬಾಣಕೃಷ್ಣೌ ಜಿಗೀಷಯಾ ।
ಪರಸ್ಪರಕ್ಷತಿಪರೌ ಪರಿಘಾಂಶ್ಚ ತತೋ ದ್ವಿಜಾಃ ॥ ೩೩ ॥

ಛಿದ್ಯಮಾನೇಷ್ವಶೇಷೇಷು ಶಸ್ತ್ರೇಷ್ವಸ್ತ್ರೇ ಚ ಸೀದತಿ ।
ಪ್ರಾಚುರ್ಯೇಣ ಹರಿರ್ಬಾಣಂ ಹಂತುಂ ಚಕ್ರೇ ತತೋ ಮನಃ ॥ ೩೪ ॥

---

೩೦. ಆಗ ತನ್ನ ಸೇನೆಯನ್ನು ಒಂದು ಕಡೆ ಬಲಭದ್ರನು ತನ್ನ ನೇಗಿಲಿನಿಂದಲೂ, ಒನಕೆಯಿಂದಲೂ, ಬಡಿಯುತ್ತಾ ನಾಶಮಾಡುತ್ತಿರುವುದನ್ನೂ, ಇನ್ನೊಂದು ಕಡೆ ಕೃಷ್ಣನು ಬಾಣಗಳಿಂದ ಸಂಹರಿಸುತ್ತಿರುವುದನ್ನೂ ಬಾಣಾಸುರನು ಕಂಡನು.

೩೧. ಕೃಷ್ಣನಿಗೂ ಬಾಣನಿಗೂ ಭಾರಿ ಹೋರಾಟವಾಯಿತು. ಅವರು ಬಿಡುತ್ತಿದ್ದ ಬಾಣಗಳು ಜ್ವಲಿಸುತ್ತಾ ತಮ್ಮತಮ್ಮ ಎದುರಾಳಿಗಳ ಯುದ್ಧಕವಚವನ್ನೂ ಸೀಳುತ್ತಿದ್ದವು.

೩೨. ಬಾಣನು ಬಿಟ್ಟ ಬಾಣಗಳನ್ನು ಕೃಷ್ಣನು ತನ್ನ ಬಾಣಗಳಿಂದ ಕತ್ತರಿಸಿ ಕೆಡುಹುವನು. ಅದೇರೀತಿ ಬಾಣಾಸುರನೂ ಕೃಷ್ಣನನ್ನು ಭೇದಿಸುವನು. ಕೃಷ್ಣನೂ ಸಹ ತನ್ನ ಶರಗಳಿಂದ ಅವನನ್ನು ಭೇದಿಸುವನು.

೩೩. ಎಲೈ ಬ್ರಾಹ್ಮಣೋತ್ತಮರೇ! ಆ ಬಾಣಕೃಷ್ಣರಿಬ್ಬರೂ, ಒಬ್ಬರಿಗೊಬ್ಬರು ಗೆಲ್ಲಬೇಕೆಂಬಾಸೆಯಿಂದ, ಒಬ್ಬರಿಗೊಬ್ಬರಿಗೆ ಗಾಯಗಳನ್ನುಂಟುಮಾಡುತ್ತಾ ಅಸ್ತ್ರಗಳನ್ನೂ, ಪರಿಘಗಳನ್ನೂ ಪ್ರಯೋಗಿಸತೊಡಗಿದರು.

೩೪. ಆಗ ತಾನು ಬಿಟ್ಟ ಆಯುಧಗಳೂ, ಅಸ್ತ್ರಗಳೂ ಎಲ್ಲವೂ ಛಿನ್ನಭಿನ್ನವಾಗಿ ಹಾಳಾಗುತ್ತಿರುವುದನ್ನು ಕಂಡು ಶ್ರೀಕೃಷ್ಣನು ಬಾಣಾಸುರನನ್ನು ಕೊಲ್ಲಬೇಕೆಂದು ಮನಸ್ಸುಮಾಡಿದನು.

ತತೋಽರ್ಕಶತಸಂಭೂತತೇಜಸಾ ಸದೃಶದ್ಯುತಿ ।
ಜಗ್ರಾಹ ದೈತ್ಯಚಕ್ರಾರಿರ್ಹರಿಶ್ಚಕ್ರಂ ಸುದರ್ಶನಂ ॥ ೩೫ ॥

ಮುಂಚತೋ ಬಾಣನಾಶಾಯ ತಚ್ಚಕ್ರಂ ಮಧುವಿದ್ವಿಷಃ ।
ನಗ್ನಾ ದೈತೇಯವಿದ್ಯಾಭೂತ್ಕೋಟರೀ ಪುರತೋ ಹರೇಃ ॥ ೩೬ ॥

ತಾಮಗ್ರತೋ ಹರಿರ್ದೃಷ್ಟ್ವಾ ಮೀಲಿತಾಕ್ಷಃ ಸುದರ್ಶನಃ ।
ಮುಮೋಚ ಬಾಣಮುದ್ದಿಶ್ಯ ಛೇತ್ತುಂ ಬಾಹುವನಂ ರಿಪೋಃ ॥ ೩೭ ॥

ಕ್ರಮೇಣಾಸ್ಯ ತು ಬಾಹೂನಾಂ ಬಾಣಸ್ಯಾಚ್ಯುತಚೋದಿತಂ ।
ಛೇದಂ ಚಕ್ರೇಽಸುರಸ್ಯಾಶು ಶಸ್ತ್ರಾಸ್ತ್ರಕ್ಷೇಪಣಾದ್ದ್ರುತಂ ॥ ೩೮ ॥

---

೩೫. ಬಳಿಕ ತೇಜಸ್ಸಿನಿಂದ ನೂರಾರು ಸೂರ್ಯನನ್ನು ಸರಿಗಟ್ಟುತ್ತಿದ್ದುದೂ ದೈತ್ಯಕುಲಕ್ಕೆ ವೈರಿಯೆನಿಸಿದುದೂ ಆದ ಸುದರ್ಶನಚಕ್ರವನ್ನು ಶ್ರೀಕೃಷ್ಣನು ಕೈಗೆ ತೆಗೆದುಕೊಂಡನು.

೩೬. ಹೀಗೆ ಬಾಣಾಸುರನನ್ನು ಸಂಹರಿಸಲು ಚಕ್ರವನ್ನು ಬಿಡಲು ಉದ್ಯುಕ್ತನಾದ ಶ್ರೀಕೃಷ್ಣನನ್ನು ಕಂಡು, ದೈತ್ಯಮಾಯೆಯು, ನಗ್ನಳಾದ ಸ್ತ್ರೀಯವೇಷವನ್ನು ತಾಳಿ ಕೃಷ್ಣನ ಮುಂದೆ ಬಂದು ನಿಂತಳು.

೩೭. ಅವಳು ತನ್ನ ಮುಂದೆ ಬಂದು ನಿಂತುದನ್ನು ಕಂಡು, ಶ್ರೀ ಕೃಷ್ಣನು ತನ್ನ ಕಣ್ಣುಗಳನ್ನು ಮುಚ್ಚಿಕೊಂಡೇ, ಶತ್ರುವಾದ ಬಾಣನ ತೋಳುಗಳನ್ನು ಕತ್ತರಿಸಬೇಕೆಂದು ನಿಶ್ಚಯಿಸಿ ಆ ಬಾಣನನ್ನುದ್ದೇಶಿಸಿ ಸುದರ್ಶನ ಚಕ್ರವನ್ನು ಬಿಟ್ಟನು.

೩೮. ಕೃಷ್ಣನಿಂದ ಬಿಡಲ್ಪಟ್ಟ ಚಕ್ರವು ಆ ಬಾಣನು ಶಸ್ತ್ರಾಸ್ತ್ರಗಳನ್ನು ಬಿಡುವುದಕ್ಕಿಂತ ಮೊದಲೇ, ಜಾಗ್ರತೆಯಾಗಿ, ಅವನ ಎಲ್ಲ ತೋಳುಗಳನ್ನೂ ಕ್ರಮವಾಗಿ ಕತ್ತರಿಸಿಬಿಟ್ಟಿತು.

ಛಿನ್ನೇ ಬಾಹುವನೇ ತತ್ತು ಕರಸ್ಥಂ ಮಧುಸೂದನಃ ।
ಮುಮುಕ್ಷುರ್ಬಾಣನಾಶಾಯ ವಿಜ್ಞಾತಸ್ತ್ರಿಪುರದ್ವಿಷಾ ॥ ೩೯

ಸ ಉತ್ಪತ್ಯಾಹ ಗೋವಿಂದಂ ಸಾನುಪೂರ್ವಮುಮಾಪತಿಃ ।
ವಿಲೋಕ್ಯ ಬಾಣಂ ದೋರ್ದಂಡಚ್ಛೇದಾಸೃಕ್ಸ್ರಾವವರ್ಷಿಣಂ ॥ ೪೦ ॥

॥ ರುದ್ರ ಉವಾಚ ॥

ಕೃಷ್ಣ ಕೃಷ್ಣ ಜಗನ್ನಾಥ ಜಾನೇ ತ್ವಾಂ ಪುರುಷೋತ್ತಮಂ ।
ಪರೇಶಂ ಪರಮಾತ್ಮಾನಮನಾದಿನಿಧಂ ಪರಂ ॥ ೪೧ ॥

ದೇವತಿರ್ಯಙ್ಮನುಷ್ಯೇಷು ಶರೀರಗ್ರಹಣಾತ್ಮಿಕಾ ।
ಲೀಲೇಯಂ ತವ ಚೇಷ್ಟಾ ಹಿ ದೈತ್ಯಾನಾಂ ವಧಲಕ್ಷಣಾ ॥ ೪೨ ॥

ತತ್ಪ್ರಸೀದಾಭಯಂ ದತ್ತಂ ಬಾಣಸ್ಯಾಸ್ಯ ಮಯಾ ಪ್ರಭೋ ।
ತತ್ತ್ವಯಾ ನಾನೃತಂ ಕಾರ್ಯಂ ಯನ್ಮಯಾ ವ್ಯಾಹೃತಂ ವಚಃ ॥ ೪೩ ॥

---

೩೯. ಆ ಸುದರ್ಶನವು ಬಾಣಾಸುರನ ಬಾಹುಗಳೆಲ್ಲವನ್ನೂ ಕತ್ತರಿಸಿದ ನಂತರ ಕೃಷ್ಣನ ಕೈಯನ್ನೇ ಸೇರಿತು. ಆಗ ಕೃಷ್ಣನು ಸುದರ್ಶನವನ್ನು ಬಾಣಾಸುರನ ವಧಾರ್ಥವಾಗಿ ಪ್ರಯೋಗಿಸುವನೆಂದು ರಥದಲ್ಲಿದ್ದ ಶಂಕರನು ತಿಳಿದನು.

೪೦. ಕೂಡಲೇ ಶಂಕರನು ಥಟ್ಟನೆ ಧುಮುಕಿ ಕೃಷ್ಣನ ಬಳಿಗೆ ಬಂದನು. ಬಾಣನ ಕೈಗಳೆಲ್ಲವೂ ಕತ್ತರಿಸಿಹೋಗಿ ರಕ್ತಸುರಿಯುತ್ತಿರುವುದನ್ನು ಕಂಡು ಆ ಉಮಾಪತಿಯು ಕೃಷ್ಣನನ್ನು ಸಮಾಧಾನಪಡಿಸುತ್ತಾ ಇಂತೆಂದನು.

೪೧. ಕೃಷ್ಣ, ಕೃಷ್ಣ, ಜಗನ್ನಾಥ! ನೀನೇ ಪರಮಪುರುಷನೆಂದು ತಿಳಿದಿರುವೆನು. ನೀನೇ ಪರಮಾತ್ಮನು. ನೀನೇ ಎಲ್ಲಕ್ಕೂ ಮೇಲಾದವನು. ನಿನಗೆ ಆದಿಯೂ ಅಂತವೂ ಇಲ್ಲವು.

೪೨. ದೇವತೆಗಳಂತೆಯೂ, ಮೃಗಗಳಂತೆಯೂ, ಮನುಷ್ಯರಂತೆಯೂ ನೀನು ಶರೀರವನ್ನು ತಾಳುವೆಯಲ್ಲವೆ? ಈ ನಿನ್ನ ಲೀಲೆಯು ದೈತ್ಯರ ವಧದ ಸಲುವಾಗಿಯೇ ಆಗಿರುವುದು.

೪೩. ಎಲೈ ಪ್ರಭುವೇ! ಪ್ರಸನ್ನನಾಗು. ನಾನೀ ಬಾಣನಿಗೆ ಅಭಯವನ್ನಿತ್ತಿರುವೆನು. ಆದುದರಿಂದ ನೀನು ನನ್ನ ಮಾತು ಸುಳ್ಳಾಗದಂತೆ ನಡೆಸಿಕೊಡಬೇಕು.

ಅಸ್ಮತ್ಸಂಶ್ರಯವೃದ್ಧೋಽಯಂ ನಾಪರಾಧಸ್ತವಾವ್ಯಯ ।
ಮಯಾ ದತ್ತವರೋ ದೈತ್ಯಸ್ತತಸ್ತ್ವಾಂ ಕ್ಷಮಯಾಮ್ಯಹಂ ॥ ೪೪ ॥

॥ ವ್ಯಾಸ ಉವಾಚ ॥

ಇತ್ಯುಕ್ತಃ ಪ್ರಾಹ ಗೋವಿಂದಃ ಶೂಲಪಾಣಿಮುಮಾಪತಿಂ ।
ಪ್ರಸನ್ನವದನೋ ಭೂತ್ವಾ ಗತಾಮರ್ಷೋಽಸುರಂ ಪ್ರತಿ ॥ ೪೫ ॥

॥ ಶ್ರೀಭಗವಾನುವಾಚ ॥

ಯುಷ್ಮದ್ದತ್ತವರೋ ಬಾಣೋ ಜೀವತಾದೇಷ ಶಂಕರ ।
ತ್ವದ್ವಾಕ್ಯಗೌರವಾದೇತನ್ಮಯಾ ಚಕ್ರಂ ನಿವರ್ತಿತಂ ॥ ೪೬ ॥

ತ್ವಯಾ ಯದಭಯಂ ದತ್ತಂ ತದ್ದತ್ತಮಭಯಂ ಮಯಾ ।
ಮತ್ತೋಽವಿಭಿನ್ನಮಾತ್ಮಾನಂ ದ್ರಷ್ಟುಮರ್ಹಸಿ ಶಂಕರ ॥ ೪೭ ॥

ಯೋಽಹಂ ಸ ತ್ವಂ ಜಗಚ್ಚೇದಂ ಸದೇವಾಸುರಮಾನುಷಂ ।
ಅವಿದ್ಯಾಮೋಹಿತಾತ್ಮಾನಃ ಪುರುಷಾ ಭಿನ್ನದರ್ಶಿನಃ ॥ ೪೮ ॥

---

೪೪. ಎಲೈ ನಾಶರಹಿತನೇ! ನನ್ನ ಆಸರೆಯಿಂದಲೇ ಈ ದೈತ್ಯನು ಇಷ್ಟು ಹೆಚ್ಚಿಕೊಂಡಿದ್ದನು. ಇದರಲ್ಲಿ ನಿನ್ನ ತಪ್ಪೇನೂ ಇಲ್ಲ. ನಾನಿವನಿಗೆ ವರವನ್ನು ಕೊಟ್ಟಿರುವೆನಾದುದರಿಂದ ನಿನ್ನನ್ನು ನಾನು ಕ್ಷಮಿಸುವಂತೆ ಬೇಡುವೆನು ಎಂದನು.

೪೫. ಎಲೈ ಮುನಿಗಳಿರಾ! ಈರೀತಿಯಾಗಿ ಶೂಲಪಾಣಿಯೂ ಉಮಾಪತಿಯೂ ಆದ ಶಿವನು ಪ್ರಾರ್ಥಿಸಲು ಬಾಣನಮೇಲಿದ್ದ ಕೋಪವನ್ನು ಬಿಟ್ಟು ಗೋವಿಂದನು ಶಂಕರನನ್ನು ಕುರಿತು—

೪೬-೪೮. “ನೀನು ವರವನ್ನು ಕೊಟ್ಟಿದ್ದ ಈ ಬಾಣನು ಬದುಕಲಿ, ನಿನ್ನ ಮಾತಿನ ಗೌರವದಮೇಲೆ ಈ ಚಕ್ರವನ್ನು ಹಿಂದಿರುಗಿಸಿರುವೆನು. ನೀನು ಇವನಿಗೆ ಅಭಯವನ್ನಿತ್ತಮೇಲೆ ನಾನೇ ಅಭಯವನ್ನಿತ್ತಂತಾಯಿತು. ಓ ಶಂಕರ! ನಾನೂ ನೀನೂ ಎಂದಿಗೂ ಬೇರೆಯಲ್ಲವೆಂದು ತಿಳಿ. ನಾನೂ ಮತ್ತು ದೇವತೆಗಳು, ಅಸುರರು, ಮನುಷ್ಯರು ಇವರಿಂದ ತುಂಬಿದ ಈ ಜಗತ್ತೂ, ನೀನೂ ಒಂದೇ. ಯಾರು ಮಾಯೆಯಿಂದ ಮೋಹಿತರಾಗಿರುವರೋ ಅಂತಹವರು ಮಾತ್ರ ನಾವಿಬ್ಬರೂ ಬೇರೆಯೆಂದೆಣಿಸುವರು” ಎಂದನು.

॥ ವ್ಯಾಸ ಉವಾಚ ॥

ಇತ್ಯುಕ್ತ್ವಾ ಪ್ರಯಯೌ ಕೃಷ್ಣಃ ಪ್ರಾದ್ಯುಮ್ನಿರ್ಯತ್ರ ತಿಷ್ಠತಿ ।
ತದ್ಬಂಧಫಣಿನೋ ನೇಶುರ್ಗರುಡಾನಿಲಶೋಷಿತಾಃ ॥ ೪೯ ॥

ತತೋಽನಿರುದ್ಧಮಾರೋಪ್ಯ ಸಪತ್ನೀಕಂ ಗರುತ್ಮತಿ ।
ಆಜಗ್ಮುರ್ದ್ವಾರಕಾಂ ರಾಮಕಾರ್ಷ್ಣಿದಾಮೋದರಾಃ ಪುರೀಂ ॥ ೫೦ ॥

ಇತಿ ಶ್ರೀಮಹಾಪುರಾಣೇ ಆದಿಬ್ರಾಹ್ಮೇ ಬಾಣಯುದ್ಧೇ
ಷಡಧಿಕದ್ವಿಶತತಮೋಽಧ್ಯಾಯಃ

---

೪೯. ಈರೀತಿಯಾಗಿ ಶ್ರೀಕೃಷ್ಣನು ನುಡಿದು, ನಂತರ ಅನಿರುದ್ಧನಿದ್ದ ಬಳಿಗೆ ಹೋದನು. ಆಗ ಗರುಡನ ಗಾಳಿ ಬೀಸುತ್ತಲೇ ಬಲಗುಂದಿದ ನಾಗ ಪಾಶಗಳೆಲ್ಲವೂ ಆ ಅನಿರುದ್ಧನನ್ನು ಬಿಟ್ಟು ಕಳಚಿಹೋದುವು.

೫೦. ಅನಂತರ ಉಷಾಸಮೇತನಾದ ಅನಿರುದ್ಧನನ್ನು ಗರುಡನಮೇಲೆ ಕೂರಿಸಿಕೊಂಡು ಕೃಷ್ಣನೂ, ಬಲರಾಮಪ್ರದ್ಯುಮ್ನರೂ ದ್ವಾರಾವತಿಗೆ ಹಿಂದಿರುಗಿದರು.

ಇಲ್ಲಿಗೆ ಶ್ರೀಬ್ರಹ್ಮಪುರಾಣದಲ್ಲಿ ಬಾಣಾಸುರನ ಯುದ್ಧವರ್ಣನೆಯೆಂಬ
ಇನ್ನೂರಾರನೆಯ ಅಧ್ಯಾಯವು ಮುಗಿದುದು.

ಶ್ರೀಃ

ಓಂ ತತ್ಸದ್ಬ್ರಹ್ಮಣೇನಮಃ

# ಅಥ ಮಹಾಪುರಾಣೇ ಬ್ರಾಹ್ಮೇ

## ಸಪ್ತಾಧಿಕದ್ವಿಶತತಮೋಽಧ್ಯಾಯಃ

॥ ಮುನಯ ಊಚುಃ ॥

ಚಕ್ರೇ ಕರ್ಮ ಮಹಚ್ಛೌರಿರ್ಬಿಭ್ರಾಣೋ ಮಾನುಷೀಂ ತನುಮ್ ।
ಜಿಗಾಯ ಶಕ್ರಂ ಶರ್ವಂ ಚ ಸರ್ವದೇವಾಂಶ್ಚ ಲೀಲಯಾ ॥ ೧ ॥

ಯಚ್ಚಾನ್ಯದಕರೋತ್ಕರ್ಮ ದಿವ್ಯಚೇಷ್ಟಾವಿಘಾತಕೃತ್ ।
ಕಥ್ಯತಾಂ ತನ್ಮುನಿಶ್ರೇಷ್ಠ ಪರಂ ಕೌತೂಹಲಂ ಹಿ ನಃ ॥ ೨ ॥

---

### ಇನ್ನೂರೇಳನೆಯ ಅಧ್ಯಾಯವು

೧–೨. ಆಗ ಮುನಿಗಳು ವ್ಯಾಸಮಹರ್ಷಿಯನ್ನು ಕುರಿತು “ ಓ ಮುನಿಶ್ರೇಷ್ಠ, ಮನುಷ್ಯ ಶರೀರವನ್ನು ಧರಿಸಿರುವ ಶ್ರೀಹರಿಯು ಅತ್ಯದ್ಭುತವಾದ ಕೆಲಸವನ್ನು ಮಾಡಿರುವನು. ಆತನು ಲೀಲೆಯಿಂದಲೇ ಇಂದ್ರನನ್ನೂ, ಶಂಕರನನ್ನೂ, ಎಲ್ಲ ದೇವತೆಗಳನ್ನೂ ಗೆದ್ದಿರುವನು. ಇದೇರೀತಿ ದೇವತೆಗಳ ಕಾರ್ಯವನ್ನು ವಿಫಲಗೊಳಿಸಿದಂತಹ ಮತ್ತೊಂದು ಶ್ರೀಕೃಷ್ಣನ ಚರಿತವನ್ನು ನಮಗೆ ತಿಳಿಸು. ಅದನ್ನು ಕೇಳಬೇಕೆಂದು ನಮಗೆ ಬಹಳ ಕುತೂಹಲವಾಗಿರುವುದು ” ಎಂದು ಕೇಳಿದರು.

॥ ವ್ಯಾಸ ಉವಾಚ ॥

**ಗದತೋ ಮೇ ಮುನಿಶ್ರೇಷ್ಠಾಃ ಶ್ರೂಯತಾಮಿದಮಾದರಾತ್ ।**
**ನರಾವತಾರೇ ಕೃಷ್ಣೇನ ದಗ್ಧಾ ವಾರಾಣಸೀ ಯಥಾ ॥ ೩ ॥**

**ಪೌಂಡ್ರಕೋ ವಾಸುದೇವಶ್ಚ ವಾಸುದೇವೋಽಭವದ್ಭುವಿ ।**
**ಅವತೀರ್ಣಸ್ತ್ವಮಿತ್ಯುಕ್ತೋ ಜನೈರಜ್ಞಾನಮೋಹಿತೈಃ ॥ ೪ ॥**

**ಸ ಮೇನೇ ವಾಸುದೇವೋಽಹಮವತೀರ್ಣೋ ಮಹೀತಲೇ ।**
**ನಷ್ಟಸ್ಮೃತಿಸ್ತತಃ ಸರ್ವಂ ವಿಷ್ಣುಚಿಹ್ನಮಚೀಕರತ್ ।**
**ದೂತಂ ಚ ಪ್ರೇಷಯಾಮಾಸ ಸ ಕೃಷ್ಣಾಯ ದ್ವಿಜೋತ್ತಮಾಃ ॥ ೫ ॥**

॥ ದೂತ ಉವಾಚ ॥

**ತ್ಯಕ್ತ್ವಾ ಚಕ್ರಾದಿಕಂ ಚಿಹ್ನಂ ಮದೀಯಂ ನಾಮ ಚಾತ್ಮನಃ ।**
**ವಾಸುದೇವಾತ್ಮಕಂ ಮೂಢ ಮುಕ್ತ್ವಾ ಸರ್ವಮಶೇಷತಃ ॥ ೬ ॥**
**ಆತ್ಮನೋ ಜೀವಿತಾರ್ಥಂ ಚ ತಥಾ ಮೇ ಪ್ರಣತಿಂ ವ್ರಜ ॥ ೭ ॥**

---

೩. ಆಗ ವ್ಯಾಸನು ಹೇಳತೊಡಗಿದನು :—ಎಲೈ ಮುನಿಗಳಿರಾ, "ಶ್ರೀಹರಿಯು ಮನುಷ್ಯನಂತೆ ಅವತರಿಸಿದ್ದಾಗ ಕಾಶೀಕ್ಷೇತ್ರವನ್ನು ಆತನು ಸುಟ್ಟ ವೃತ್ತಾಂತವನ್ನು ಹೇಳುವೆನು ಆದರದಿಂದ ಕೇಳಿರಿ."

೪. ಕೃಷ್ಣನ ಕಾಲದಲ್ಲಿ ಅವನಿಗೆ ವಾಸುದೇವನೆಂದು ಹೆಸರಿದ್ದಂತೆ ಪೌಂಡ್ರಕನೆಂಬುವವನಿಗೂ ವಾಸುದೇವನೆಂಬ ಹೆಸರಿದ್ದಿತು. ಅಜ್ಞಾನದಿಂದ ಮೋಹಿತರಾದ ಜನರು "ನೀನೇ ಭೂಮಿಯಲ್ಲಿ ಅವತರಿಸಿರುವ ಪರಮಾತ್ಮನೆಂದು" ಅವನನ್ನು ಸ್ತುತಿಸುತ್ತಿದ್ದರು.

೫. ಆ ಬುದ್ಧಿಹೀನನು ಅದಕ್ಕೆ ಮರುಳಾಗಿ ನಾನೇ ಭೂಮಿಯಲ್ಲಿ ಅವತರಿಸಿರುವ ವಾಸುದೇವನೆಂದು ಭಾವಿಸಿಕೊಂಡು, ವಿವೇಕವಿಲ್ಲದೆ ವಿಷ್ಣುವಿನ ಚಿಹ್ನೆಗಳೆಲ್ಲವನ್ನೂ ಧರಿಸಿದುದಲ್ಲದೆ ಕೃಷ್ಣನ ಬಳಿಗೆ ದೂತನನ್ನೂ ಕಳುಹಿಸಿದನು.

೬-೭. ಆ ದೂತನು ಕೃಷ್ಣನ ಬಳಿಗೆ ಬಂದು ಪೌಂಡ್ರಕನು ಹೇಳಿ ಕಳುಹಿಸಿದ್ದಂತೆ, ಆ ಕೃಷ್ಣನನ್ನು ಕುರಿತು "ನಿನ್ನ ಚಿಹ್ನೆಗಳಾದ ಚಕ್ರ ಮೊದಲಾದುವುಗಳನ್ನೆಲ್ಲಾ ಒಂದೂ ಇಟ್ಟುಕೊಳ್ಳದೆ ತೊರೆದುಬಿಡು. ವಾಸುದೇವನೆಂಬ ಹೆಸರೂ ನನ್ನದು. ನಿನ್ನದಲ್ಲ. ಅದನ್ನು ಬಿಟ್ಟುಬಿಡು. ನೀನು ಬದುಕಬೇಕಾಗಿದ್ದರೆ ನನಗೆ ಶರಣಾಗತನಾಗು" ಎಂದು ತಿಳಿಸಿದನು.

॥ ವ್ಯಾಸ ಉವಾಚ ॥

ಇತ್ಯುಕ್ತಃ ಸ ಪ್ರಹಸ್ಯೈವ ದೂತಂ ಪ್ರಾಹ ಜನಾರ್ದನಃ ॥ ೮ ॥

॥ ಶ್ರೀಭಗವಾನುವಾಚ ॥

ನಿಜಚಿಹ್ನಮಹಂ ಚಕ್ರಂ ಸಮುತ್ಸ್ರಕ್ಷ್ಯೇ ತ್ವಯೀತಿ ವೈ ।
ವಾಚ್ಯಶ್ಚ ಪೌಂಡ್ರಕೋ ಗತ್ವಾ ತ್ವಯಾ ದೂತ ವಚೋ ಮಮ ॥ ೯ ॥

ಜ್ಞಾತಸ್ತ್ವದ್ವಾಕ್ಯಸದ್ಭಾವೋ ಯತ್ಕಾರ್ಯಂ ತದ್ವಿಧೀಯತಾಂ ।
ಗೃಹೀತಚಿಹ್ನ ಏವಾಹಮಾಗಮಿಷ್ಯಾಮಿ ತೇ ಪುರಂ ॥ ೧೦ ॥

ಉತ್ಸ್ರಕ್ಷ್ಯಾಮಿ ಚ ತೇ ಚಕ್ರಂ ನಿಜಚಿಹ್ನಮಸಂಶ್ರಯಂ ।
ಆಜ್ಞಾಪೂರ್ವಂ ಚ ಯದಿದಮಾಗಚ್ಛೇತಿ ತ್ವಯೋದಿತಂ ॥ ೧೧ ॥

---

೮. ಎಲೈ ಮುನಿಗಳಿರಾ! ಈ ಮಾತನ್ನು ಕೇಳಿ ಕೃಷ್ಣನು ಗಟ್ಟಿಯಾಗಿ ನಕ್ಕು ಅವನನ್ನಿಂತೆಂದನು.

೯. ಓ ದೂತ! "ನಿನ್ನ ಸ್ವಂತ ಚಿಹ್ನವಾದ ಚಕ್ರವನ್ನು ನಿನಗೇ ಬಿಟ್ಟುಕೊಡುವೆನೆಂದು" ಆ ಪೌಂಡ್ರಕನಿಗೆ ನನ್ನ ಮಾತನ್ನು ತಿಳಿಸು.

೧೦. ನಿನ್ನ ಮಾತಿನ ಅಭಿಪ್ರಾಯವು ತಿಳಿಯಿತು. ನೀನು ಏನು ಮಾಡಬೇಕಾಗಿರುವುದೋ ಆ ಕೆಲಸವನ್ನು ಮಾಡಬಹುದು. ನಾನು ಆ ಚಿಹ್ನೆಗಳನ್ನು ಧರಿಸಿಯೇ ನಿನ್ನ ಊರಿಗೆ ಬರುವೆನು.

೧೧–೧೨. ನೀನೇನೂ ಸಂಶಯಪಡಬೇಕಾಗಿಲ್ಲ. ನಿನ್ನ ಚಿಹ್ನವಾದ ಚಕ್ರವನ್ನು ನಿನಗೇ ಬಿಡುವೆನು. ನೀನು ಬಾರೆಂದು ಆಜ್ಞಾಪೂರ್ವಕವಾಗಿ ನನಗೆ ಹೇಳಿ ಕಳುಹಿಸಿರುವೆಯಲ್ಲವೇ? ಆ ಮಾತನ್ನು ಕೂಡ ಸ್ವಲ್ಪವೂ ತಡ ಮಾಡದೆ ನಾಳೆಯೇ ನಡೆಸಿಕೊಡುವೆನು ಎಲೆ ಅರಸೇ, ನಿನಗೆ ಶರಣು ಬಂದು, ಮತ್ತೆ ನಿನ್ನಿಂದ ಹೆದರಿಕೆಯೊದಗದಂತೆ ಮಾಡುವೆನು" (ನಾಳೆ ನಿನ್ನ ನಿವಾ

ಸಂಪಾದಯಿಷ್ಯೇ ಶ್ವಸ್ತುಭ್ಯಂ ತದಸ್ಯೇಷೋಽವಿಲಂಬಿತಂ ।
ಶರಣಂ ತೇ ಸಮಭ್ಯೇತ್ಯ ಕರ್ತಾಸ್ಮಿ ನೃಪತೇ ತಥಾ ।
ಯಥಾ ತ್ವತ್ತೋ ಭಯಂ ಭೂಯೋ ನೈವ ಕಿಂಚಿದ್ಭವಿಷ್ಯತಿ ॥ ೧೨ ॥

॥ ವ್ಯಾಸ ಉವಾಚ ॥

ಇತ್ಯುಕ್ತೇಽಪಗತೇ ದೂತೇ ಸಂಸ್ಮೃತ್ಯಾಭ್ಯಾಗತಂ ಹರಿಃ ।
ಗರುತ್ಮಂತಂ ಸಮಾರುಹ್ಯ ತ್ವರಿತಂ ತತ್ಪುರಂ ಯಯೌ ॥ ೧೩ ॥

ತಸ್ಯಾಪಿ ಕೇಶವೋದ್ಯೋಗಂ ಶ್ರುತ್ವಾಕಾಶಿಪತಿಸ್ತದಾ ।
ಸರ್ವಸೈನ್ಯಪರೀವಾರಪಾರ್ಷ್ಣಿಗ್ರಾಹಮುಪಾಯಯೌ ॥ ೧೪ ॥

ತತೋ ಬಲೇನ ಮಹತಾ ಕಾಶಿರಾಜಬಲೇನ ಚ ।
ಪೌಂಡ್ರಕೋ ವಾಸುದೇವೋಽಸೌ ಕೇಶವಾಭಿಮುಖಂ ಯಯೌ ॥ ೧೫ ॥

---

ಸಕ್ಕೇ ಬಂದು ಮುಂದೆ ನಿನ್ನಿಂದ ಈರೀತಿ ಬೆದರಿಕೆಯು ಬಾರದಂತೆ ಮಾಡುವೆನು (ಸಾಯಿಸುವೆನು.) ಎಂದು ದೂತನಿಗೆ ಹೇಳಿಕಳುಹಿಸಿದನು.

೧೩. ಎಲೈ ಮುನಿಗಳಿರಾ! ಹೀಗೆ ಆ ಪೌಂಡ್ರಕನ ದೂತನಿಗೆ ಹೇಳಿ ಕಳುಹಿಸಿದ ನಂತರ ಗರುಡನನ್ನು ಮನಸಾ ಸ್ಮರಿಸಿದನು. ಕೂಡಲೇ ಅವನು ಸನ್ನಿಹಿತನಾದನು. ಆ ಗರುಡನನ್ನೇರಿ ಆ ಪೌಂಡ್ರಕನ ಊರಿಗೆ ಬೇಗನೆ ಹೊರಟನು.

೧೪. ಆಗ ಪೌಂಡ್ರಕನ ಸ್ನೇಹಿತನಾದ ಕಾಶೀರಾಜನು, ಶ್ರೀಕೃಷ್ಣನು ತನ್ನ ಮಿತ್ರನ ಮೇಲೇರಿ ಬರುವುದನ್ನು ತಿಳಿದು ತನ್ನೆಲ್ಲಾ ಸೈನ್ಯದೊಡನೆ ಕೂಡಿಕೊಂಡು ಆ ಪೌಂಡ್ರಕನಿಗೆ ಬೆಂಗಾವಲಾಗಿ ಬಂದನು.

೧೫. ಅನಂತರ ಆ ಪೌಂಡ್ರಕ ವಾಸುದೇವನು ಅಪಾರವಾದ ತನ್ನ ಸೇನೆಯೊಡನೆಯೂ ಕಾಶೀರಾಜನ ಸೇನೆಯೊಡನೆಯೂ ಕೂಡಿ, ಶ್ರೀಕೃಷ್ಣನಿಗೆ ಎದುರಾಗಿ ಹೊರಟನು.

ತಂ ದದರ್ಶ ಹರಿರ್ದೂರಾದುದಾರಸ್ಯಂದನೇ ಸ್ಥಿತಂ ।
ಚಕ್ರಶಂಖಗದಾಪಾಣಿಂ ಪಾಣಿನಾ ವಿಧೃತಾಂಬುಜಂ ॥ ೧೬ ॥

ಸ್ರಗ್ಧರಂ ಧೃತಶಾರ್ಙ್ಗಂ ಚ ಸುಪರ್ಣರಚನಾಧ್ವಜಂ ।
ವಕ್ಷಸ್ಥಲಕೃತಂ ಚಾಸ್ಯ ಶ್ರೀವತ್ಸಂ ದದೃಶೇ ಹರಿಃ ॥ ೧೭ ॥

ಕಿರೀಟಕುಂಡಲಧರಂ ಪೀತವಾಸಃಸಮನ್ವಿತಂ ।
ದೃಷ್ಟ್ವಾ ತಂ ಭಾವಗಂಭೀರಂ ಜಹಾಸ ಮಧುಸೂದನಃ ॥ ೧೮ ॥

ಯುಯುಧೇ ಚ ಬಲೇನಾಸ್ಯ ಹಸ್ತ್ಯಶ್ವಬಲಿನಾ ದ್ವಿಜಾಃ ।
ನಿಸ್ತ್ರಿಂಶರ್ಷ್ಟಿಗದಾಶೂಲಶಕ್ತಿಕಾರ್ಮುಕಶಾಲಿನಾ ॥ ೧೯ ॥

ಕ್ಷಣೇನ ಶಾರ್ಙ್ಗನಿರ್ಮುಕ್ತೈಃ ಶರೈರಗ್ನಿವಿದಾರಣೈಃ ।
ಗದಾಚಕ್ರಾತಿಪಾತೈಶ್ಚ ಸೂದಯಾಮಾಸ ತದ್ಬಲಂ ॥ ೨೦ ॥

---

೧೬-೧೮. ಈರೀತಿ ದೊಡ್ಡ ತೇರಿನಲ್ಲಿ ಕುಳಿತು, ಕೈಗಳಲ್ಲಿ ಶಂಖ ಚಕ್ರಗಳನ್ನೂ ಗದಾಪದ್ಮಗಳನ್ನೂ ಧರಿಸಿ ಕೊರಳಲ್ಲಿ ವನಮಾಲೆಯನ್ನು ತಳೆದು, ಕೈಲಿ ಶಾರ್ಙ್ಗಧನುಸ್ಸನ್ನು ಹಿಡಿದು, ಗರುಡಾಕಾರದ ಧ್ವಜವನ್ನು ಕಟ್ಟಿಕೊಂಡು, ಎದೆಯಮೇಲೆ ಶ್ರೀವತ್ಸದಂತೆ ಕಲೆಯನ್ನು ತೋರುತ್ತಾ, ಕಿರೀಟ ಕುಂಡಲಗಳಿಂದಲೂ, ಪೀತಾಂಬರದಿಂದಲೂ ಶೋಭಿಸುತ್ತಾ ಬರುತ್ತಿರುವ ಆ ಪೌಂಡ್ರಕ ವಾಸುದೇವನನ್ನು ದೂರದಿಂದಲೇ ಶ್ರೀಕೃಷ್ಣನು ಕಂಡು ಭಾವಗರ್ಭಿತವಾಗಿ ಗಂಭೀರವಾಗಿ ನಕ್ಕನು.

೧೯. ಎಲೈ ಬ್ರಾಹ್ಮಣರಿರಾ! ಬಳಿಕ ಆ ಪೌಂಡ್ರಕನ ಸೇನೆಗೂ ಶ್ರೀಕೃಷ್ಣನಿಗೂ ಯುದ್ಧವು ಜರುಗಿತು. ಆ ಸೈನ್ಯವು ಆನೆಗಳಿಂದಲೂ ಕುದುರೆಗಳಿಂದಲೂ ಬಲಾಢ್ಯರಾದ ಯೋಧರಿಂದಲೂ, ಕತ್ತಿ, ಋಷ್ಟಿ, ಗದೆ, ಶೂಲ, ಶಕ್ತಿ, ಬಿಲ್ಲು ಮೊದಲಾದ ಆಯುಧಗಳಿಂದಲೂ ಸುಸಜ್ಜಿತವಾಗಿತ್ತು.

೨೦. ಆದರೇನು ? ಶ್ರೀಕೃಷ್ಣನು ಕ್ಷಣಮಾತ್ರದಲ್ಲಿಯೇ ತನ್ನ ಶಾರ್ಙ್ಗಧನುಸ್ಸಿನಿಂದ ಬೀಸಿ ಬಿಡಲ್ಪಟ್ಟು ಸರ್ರನೆ ಬರುತ್ತಾ, ಬೆಂಕಿಯನ್ನೂ ಭೇದಿಸಿ ಬಿಡುತ್ತಿದ್ದಂತಹ ಬಾಣಗಳಿಂದಲೂ, ಗದೆ, ಚಕ್ರ ಮೊದಲಾದ ಆಯುಧಗಳ ಹೊಡೆತದಿಂದಲೂ ಆ ಸೇನೆಯೆಲ್ಲವನ್ನೂ ನಾಶಮಾಡಿದನು.

ಕಾಶಿರಾಜಬಲಂ ಚೈವ ಕ್ಷಯಂ ನೀತ್ವಾ ಜನಾರ್ದನಃ ।
ಉವಾಚ ಪೌಂಡ್ರಕಂ ಮೂಢಮಾತ್ಮಚಿಹ್ನೋಪಲಕ್ಷಣಂ ॥ ೨೧ ॥

॥ ಶ್ರೀಭಗವಾನುವಾಚ ॥

ಪೌಂಡ್ರಕೋಕ್ತಂ ತ್ವಯಾ ಯತ್ತದ್ದೂತವಕ್ತ್ರೇಣ ಮಾಂ ಪ್ರತಿ ।
ಸಮುತ್ಸೃಜೇತಿ ಚಿಹ್ನಾನಿ ತತ್ತೇ ಸಂಪಾದಯಾಮ್ಯಹಂ ॥ ೨೨ ॥

ಚಕ್ರಮೇತತ್ಸಮುತ್ಸೃಷ್ಟಂ ಗದೇಯಂ ತೇ ವಿಸರ್ಜಿತಾ ।
ಗರುತ್ಮಾನೇಷ ನಿರ್ದಿಷ್ಟಃ ಸಮಾರೋಹತು ತೇ ಧ್ವಜಂ ॥ ೨೩ ॥

ಇತ್ಯುಚ್ಚಾರ್ಯ ವಿಮುಕ್ತೇನ ಚಕ್ರೇಣಾಸೌ ವಿದಾರಿತಃ ।
ಪೋಥಿತೋ ಗದಯಾ ಭಗ್ನೋ ಗರುತ್ಮಾಂಶ್ಚ ಗರುತ್ಮತಾ ॥ ೨೪ ॥

---

೨೧. ಅಲ್ಲದೆ ಆ ಪೌಂಡ್ರಕನ ಸಹಾಯಕ್ಕೆ ಬಂದಿದ್ದ ಕಾಶೀರಾಜನ ಸೈನ್ಯವನ್ನೂ ಸದೆಬಡಿದನು. ಬಳಿಕ ವಿವೇಕರಹಿತನಾಗಿ ಜ್ಞಾನವಿಲ್ಲದೆ ಶಂಖ ಚಕ್ರಾದಿಯಾದ ತನ್ನ ಚಿಹ್ನೆಗಳನ್ನು ಧರಿಸಿದ್ದ ಪೌಂಡ್ರಕನನ್ನು ಇಂತೆಂದನು.

೨೨. ಎಲೈ ಪೌಂಡ್ರಕನೇ, ನೀನು ನಿನ್ನ ದೂತನ ಮುಖಾಂತರ ನನ್ನ ಚಿಹ್ನೆಗಳೆಲ್ಲವನ್ನೂ ತೊರೆದುಬಿಡಬೇಕೆಂದು ಹೇಳಿ ಕಳುಹಿಸಿದ್ದೆಯಲ್ಲವೇ? ಇಗೋ! ನಿನ್ನ ಮಾತನ್ನೇ ಈಗ ನೆರವೇರಿಸುತ್ತಿರುವೆನು.

೨೩. (ನಿನ್ನ ಮಾತಿನಂತೆ) ಇದೋ ಚಕ್ರವನ್ನು ಬಿಸುಟೆನು. ಗದೆಯನ್ನೂ ನಿನಗೆ (ನಿನ್ನಮೇಲೆ) ಬಿಟ್ಟುಕೊಟ್ಟೆನು. ನಿನ್ನ ಧ್ವಜವನ್ನೇರುವಂತೆ ಈ ಗರುಡನಿಗೂ ಆಜ್ಞಾಪಿಸಿರುವೆನು.

೨೪. ಹೀಗೆಂದು ಹೇಳಿ ಸುದರ್ಶನದಿಂದ ಆ ಪೌಂಡ್ರಕನನ್ನು ಎರಡು ತುಂಡಾಗಿ ಕತ್ತರಿಸಿದುದಲ್ಲದೆ ಗದೆಯಿಂದಲೂ ಚೆನ್ನಾಗಿ ಅಪ್ಪಳಿಸಿದನು. ಗರುಡನು ಆ ಪೌಂಡ್ರಕನ ಕೃತ್ರಿಮವಾದ ಗರುಡನನ್ನು ಮುರಿದು ಹಾಕಿದನು.

ತತೋ ಹಾಹಾಕೃತೇ ಲೋಕೇ ಕಾಶೀನಾಮಧಿಪಸ್ತದಾ ।
ಯುಯುಧೇ ವಾಸುದೇವೇನ ಮಿತ್ರಸ್ಯಾಪಚಿತೌ ಸ್ಥಿತಃ ॥ ೨೫ ॥

ತತಃ ಶಾರ್ಙ್ಗವಿನಿರ್ಮುಕ್ತೈಶ್ಛಿತ್ತ್ವಾ ತಸ್ಯ ಶರೈಃ ಶಿರಃ ।
ಕಾಶಿಪುರ್ಯಾಂ ಸ ಚಿಕ್ಷೇಪ ಕುರ್ವಲ್ಲೋಕಸ್ಯ ವಿಸ್ಮಯಂ ॥ ೨೬ ॥

ಹತ್ವಾ ತು ಪೌಂಡ್ರಕಂ ಶೌರಿಃ ಕಾಶಿರಾಜಂ ಚ ಸಾನುಗಂ ।
ರೇಮೇ ದ್ವಾರವತೀಂ ಪ್ರಾಪ್ತೋಽಮರಃ ಸ್ವರ್ಗಗತೋ ಯಥಾ ॥ ೨೭ ॥

ತಚ್ಛಿರಃ ಪತಿತಂ ತತ್ರ ದೃಷ್ಟ್ವಾ ಕಾಶಿಪತೇಃ ಪುರೇ ।
ಜನಃ ಕಿಮೇತದಿತ್ಯಾಹ ಕೇನೇತ್ಯತ್ಯಂತವಿಸ್ಮಿತಃ ॥ ೨೮ ॥

ಜ್ಞಾತ್ವಾ ತಂ ವಾಸುದೇವೇನ ಹತಂ ತಸ್ಯ ಸುತಸ್ತತಃ ।
ಪುರೋಹಿತೇನ ಸಹಿತಸ್ತೋಷಯಾಮಾಸ ಶಂಕರಂ ॥ ೨೯ ॥

---

೨೫. ಇದನ್ನು ಕಂಡು ಅವನಕಡೆಯ ಜನರು ಹಾಹಾಕಾರ ಮಾಡಿದರು. ಆಗ ತನ್ನ ಮಿತ್ರನ ಸೇವೆಗೆಂದು ಬಂದಿದ್ದ ಕಾಶೀರಾಜನು ಕೃಷ್ಣನೊಡನೆ ಕಾದಾಡತೊಡಗಿದನು.

೨೬. ಆಗ ಶ್ರೀಕೃಷ್ಣನು ಜನರೆಲ್ಲರಿಗೂ ಆಶ್ಚರ್ಯವುಂಟಾಗುವಂತೆ, ತನ್ನ ಶಾರ್ಙ್ಗ ಧನುಸ್ಸಿನಿಂದ ಬಿಡಲ್ಪಟ್ಟ ಬಾಣಗಳಿಂದ, ಆ ಕಾಶೀರಾಜನ ತಲೆಯನ್ನು ಕತ್ತರಿಸಿ ಅದನ್ನು ಕಾಶೀಕ್ಷೇತ್ರದಲ್ಲಿ ಬೀಳಿಸಿದನು.

೨೭. ಈರೀತಿಯಾಗಿ ಪೌಂಡ್ರಕನನ್ನೂ ಕಾಶೀರಾಜನನ್ನೂ ಅವರವರ ಪರಿವಾರದೊಡನೆ ಕೊಂದು, ಆ ಶ್ರೀಕೃಷ್ಣನು ಸ್ವರ್ಗಲೋಕದಲ್ಲಿ ದೇವರಾಜನು ವಿಹರಿಸುವಂತೆ ದ್ವಾರಕೆಯಲ್ಲಿ ವಿಹರಿಸುತ್ತಿದ್ದನು.

೨೮. ಇತ್ತಲಾಗಿ ತಮ್ಮ ಪ್ರಭುವಿನ ತಲೆಯು ಕತ್ತರಿಸಿಹೋಗಿ ಕಾಶೀಕ್ಷೇತ್ರದಲ್ಲಿ ಬಿದ್ದುದನ್ನು ಕಂಡು ಅಲ್ಲಿಯ ನಿವಾಸಿಗಳು ಇದೇನು? ಇದೇನು? ಎಂಬುದಾಗಿ ಅತ್ಯಾಶ್ಚರ್ಯವನ್ನು ತಾಳಿದರು.

೨೯. ಆಗ ಈ ಕೆಲಸವು ಶ್ರೀಕೃಷ್ಣನಿಂದ ನಡೆಯಿತೆಂದು ತಿಳಿದು ಆ ಕಾಶೀರಾಜನ ಪುತ್ರನು ತನ್ನ ಪುರೋಹಿತನ ಸಹಾಯದೊಡನೆ ಶ್ರೀ ಶಂಕರನನ್ನು ಸಂತೋಷಗೊಳಿಸಿದನು.